# ಮಾನಸ

ಮೇ 2005 ತಿಂಗಳ ಪತ್ರಿಕೆ

- 'ಅಮ್ಮ' ನಮ್ಮ ಮನಗಳಲ್ಲಿ .............
- ಪ್ರಚಲಿತದಲ್ಲಿ ಸ್ತ್ರೀ ಸಬಲೀಕರಣದ ಅವಶ್ಯಕತೆ
- ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತಿನ ಕೇಸರೀಕರಣ
- "ಸಂಚಾರಂ" - ಸಲಿಂಗ ಕಾಮದ ದೃಶ್ಯಕಾವ್ಯ
- ವಿದಾಯ
- ರಾತ್ರಿಯ ನೆರಳುಗಳು

**ಮಾನಸ** ತಿಂಗಳ ಪತ್ರಿಕೆ
ಸಂಪುಟ : 20

ಮೇ 2005
ಸಂಚಿಕೆ : 5



**ವಿಳಾಸ :**
**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

**ಸೂಚನೆ :** ಬಿಡಿಪ್ರತಿ 10-00 ರೂ.
ವಾರ್ಷಿಕ ಚಂದಾ 100-00 ರೂ.
ಸಂಸ್ಥೆಗಳಿಗೆ 150-00 ರೂ.

## ಈ ಸಂಚಿಕೆಯಲ್ಲಿ.....



**ಮೈಸೂರು**
ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# ಸಂಪಾದಕೀಯ



ಹಂಪಿ ವಿಶ್ವವಿದ್ಯಾನಿಲಯದ ಮಹಿಳಾ ಅಧ್ಯಯನ ವಿಭಾಗದಲ್ಲಿ ಹೊಸ ಚಿಂತನೆಗೊಂದು ರೂಪ ಕೊಡುವ ಮಹತ್ವವಾದ ಸಂಕೀರ್ಣವೊಂದು ಇತ್ತೀಚೆಗೆ ನಡೆಯಿತು. 70 ರ ದಶಕದಲ್ಲಿ ಸ್ವಾಯತ್ತ ಮಹಿಳಾ ಚಳುವಳಿ-ಕ್ರಿಯೆ ಹಾಗೂ ಅಧ್ಯಯನಗಳ ನಡುವಿನ ಸಂಬಂಧದ ಅಗತ್ಯಗಳನ್ನು ಸೈದ್ಧಾಂತಿಕ ನೆಲೆಯಲ್ಲಿ ಅಷ್ಟೇ ಅಲ್ಲದೇ ಕ್ರಿಯಾಶೀಲ ನೆಲೆಯಲ್ಲಿಯೂ ರೂಪು ಕೊಡಲು ಪ್ರಯತ್ನಿಸಿತ್ತು. ಹಾಗಾಗಿ ಚಳುವಳಿಯ ವಕ್ತಾರರು ಬೀದಿಗಿಳಿದು ಮೆರವಣಿಗೆ, ಕಾದಾಟ, ಹೋರಾಟ ಮಾಡುವುದರೊಂದಿಗೆ ಸೈದ್ಧಾಂತಿಕವಾಗಿ ಕೂಡಾ ಚಳುವಳಿಯ ದಿಕ್ಕು, ಹೋರಾಟದ ನೆಲೆ, ಪ್ರಮುಖ ಸಮಸ್ಯೆಗಳನ್ನು ಸ್ಪಷ್ಟವಾಗಿ ಯೋಚಿಸುವ, ಹೋರಾಟ ರೂಪಿಸಿ, ಕಾರ್ಯರೂಪಕ್ಕೆ ತರಲು ಪ್ರಯತ್ನಿಸಿದ್ದರು. ಕ್ರಿಯೆಯಲ್ಲಿ ಸ್ಫೂರ್ತಿಯಿಂದ ತೊಡಗಿಸಿಕೊಳ್ಳುವ ನೂರಾರು ಕಾರ್ಯಕರ್ತೆಯರು ಅಷ್ಟೇ ಸ್ಫೂರ್ತಿಯಿಂದ ಅಧ್ಯಯನ ಶೀಲರಾಗಲು ಹಲವಾರು ಎಡರು-ತೊಡರುಗಳ ಜೊತೆಗೆ - ಚಳುವಳಿಯ ವೈಫಲ್ಯತೆಯೂ ಕಾರಣವಾಗಿತ್ತು.

ಈ ಕ್ರಿಯೆ ಹಾಗೂ ಅಧ್ಯಯನಗಳನ್ನು ಸಮದೂಗಿಸಲು ಚಳುವಳಿಯಿಂದ ನಡೆದ ಪ್ರಯತ್ನಗಳು ಅಷ್ಟಾಗಿ ವಿಶ್ವವಿದ್ಯಾನಿಲಯಗಳಿಂದ ನಡೆಯಲ್ಲಿ. ಅನೇಕ ವಿಶ್ವ ವಿದ್ಯಾನಿಲಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳು ಪ್ರಾರಂಭವಾದರೂ ಅವು ಬಹಳ ಅಕ್ಯಾಡಮಿಕ್ ನೆಲೆಯಲ್ಲಿಯೇ ಮುಂದುವರಿಯ ತೊಡಗಿದವು. ಹಾಗಾಗಿ ಕಾರ್ಯಕರ್ತೆಯರನ್ನು ಸಕ್ರಿಯವಾಗಿ ಒಳಗೊಳ್ಳುವ ಪ್ರಕ್ರಿಯೆ ಇಲ್ಲಿ ನಡೆಯಲೇ ಇಲ್ಲ. ಕ್ರಿಯೆ ಹಾಗೂ ಅಧ್ಯಯನಗಳ ನಡುವೆ ಒಂದು ಸಕಾರಾತ್ಮಕ ಸಂಬಂಧ ಸಾಧ್ಯವಾಗದಿರುವುದು ಕಟು ಸತ್ಯ.

ಈಗ ಈ ನೆಲೆಯಲ್ಲಿ ಹಂಪಿಯ ವಿಶ್ವವಿದ್ಯಾನಿಲಯ ಹೊಸದಾಗಿ ಮತ್ತೆ ಚರ್ಚೆ ಆರಂಭಿಸಿದೆ. ಅಧ್ಯಯನ ಶೀಲರು ಹಾಗೂ ಕಾರ್ಯಕರ್ತರ ಮಧ್ಯೆ ಒಂದು ನಿಕಟ ಸಂಬಂಧ, ಸಾವಯವ ಸಂಬಂಧ ರೂಪಿಸಬೇಕೆನ್ನುವ ಉತ್ಸಾಹ, ಆಶಯ ಮಾರ್ಚ್‌ನಲ್ಲಿ ಹಮ್ಮಿಕೊಳ್ಳಲಾದ ಸಂಕೀರ್ಣದಲ್ಲಿ ಕಂಡು ಬಂದಿತ್ತು.

ಹಂಪಿ ವಿಶ್ವವಿದ್ಯಾನಿಲಯದ ಮಹಿಳಾ ಅಧ್ಯಯನ-ಕೇಂದ್ರದ ಆಶಯ ಸ್ಪಷ್ಟವಾಗಬೇಕಾಗಿದೆ. ಮುಕ್ತ ಅನುಭವಗಳ ಹಂಚಿಕೆಯಿಂದ ಮಾತ್ರ ಅಧ್ಯಯನ ಶೀಲರ ಹಾಗೂ ಕಾರ್ಯಕರ್ತರ ನಡುವೆ ಸಂಬಂಧ ಏರ್ಪಡಲು ಸಾಧ್ಯ. ಈ ಪ್ರಕ್ರಿಯೆ ನಿಧಾನವಾದರೂ ಅರ್ಥಪೂರ್ಣವಾಗಿ ನಡೆಯಬೇಕಾಗಿದೆ. ಪ್ರಕ್ರಿಯೆ ಮುಖ್ಯ ಕೊಡು-ಕೊಳ್ಳುವಿಕೆಯ ಹಂತದಲ್ಲಿ ಸ್ವಾಯತ್ತ ಮಹಿಳಾ ಚಳುವಳಿ ನಂಬಿದ ಶ್ರೇಣಿ ರಹಿತವಾದ ಕಲ್ಪನೆ ಮೂರ್ತಗೊಳ್ಳಬೇಕಾಗಿದೆ. ಕಾರ್ಯಕರ್ತರ ಅನುಭವಗಳನ್ನು ಅಧ್ಯಯನ ಒಳಗೊಳ್ಳುವ, ಅಧ್ಯಯನ ಶೀಲತೆಯ ಒಳನೋಟಗಳನ್ನು ಚಳುವಳಿಯ ಕಾರ್ಯಕರ್ತರು ಒಳಗೊಳ್ಳುವ ಪ್ರಕ್ರಿಯೆಯ ಸ್ವರೂಪ, ಸಂಗಟನೆಯ ಸ್ವರೂಪ ಹಂಪಿಯ 'ಕರ್ನಾಟಕ ಸಕ್ರಿಯ ಮಹಿಳಾ ಅಧ್ಯಯನ'ದ ವೇದಿಕೆಯ ಸ್ವರೂಪ ಇವುಗಳ ಚರ್ಚೆ ಸುದೀರ್ಘವಾಗಿ ನಡೆದು ವಾಸ್ತವವಾದಾಗ ಮಾತ್ರ ಎಲ್ಲರ ಕನಸುಗಳಿಗೆ ಒಂದು ರೂಪ ಕೊಡಲು ಸಾಧ್ಯವಾಗುತ್ತದೆ.

# 'ಅಮ್ಮ' ನಮ್ಮ ಮನಗಳಲ್ಲಿ ..............

ಡಾ॥ ಬಿ.ಎಸ್. ಸುಮಿತ್ರಾ ಬಾಯಿ

ಭಾರತೀಯ ಸಮಾಜದಲ್ಲಿ ತುಂಬ ಬಲವಾಗಿ ಕಂಡುಬರುವ ಲಕ್ಷಣ ಅಮ್ಮನ ಆರಾಧನೆ. ಈ ದೇಶದ ಬಹುಮುಖಿ ಸಂಸ್ಕೃತಿಯ ಎಲ್ಲಾ ಅಭಿವ್ಯಕ್ತಿ ವಿಭಾಗಗಳಲ್ಲೂ ತಾಯ್ತನದ ಆರಾಧನೆಯ ತಾತ್ವಿಕತೆ ಹಬ್ಬಿಕೊಂಡಿದೆ/ ಮೈಗೂಡಿಕೊಂಡಿದೆ. ತಾಯ ಗರ್ಭದೊಳಗಿನ ಮಗುವಿನ ಸ್ಥಿತಿಯೇ ಎಲ್ಲಾ ಆಧ್ಯಾತ್ಮಿಕ ಚರ್ಚೆಗಳೂ ತಲುಪಲು ಬಯಸುವ ಮೋಕ್ಷದ ಪರಮಾನಂದದ ಸ್ಥಿತಿ. ದೈವಿಕತೆ ಎನ್ನುವುದು ಹೀಗೆ ಎಲ್ಲವನ್ನೂ ತನ್ನೊಳಗೆ ಗರ್ಭದಲ್ಲೇ?) ಅಡಗಿಸಿ ಇಟ್ಟುಕೊಂಡು ಪೋಷಿಸುವ ಮಾತೆಯದೇ "ಸರ್ವತೋವ್ಯಾಪ್ಯ ವಿಶ್ವಂ" ಎಂಬ ವಿಸ್ತರಣೆಯದಾಗಿದೆ, ಜಂಟಿಕುಟುಂಬ ವ್ಯವಸ್ಥೆ ಒಂದು ಕಡೆ, ಬಹುಸ್ತರಗಳ ಶ್ರೇಣೀಕರಣ ಇನ್ನೊಂದುಕಡೆ ವ್ಯಕ್ತಿಮತ್ತು ಶರೀರಗಳು ಎಂದೂ ಬೇರೆಯಾಗಿರದ ಏಕಾಕಾರದ ವ್ಯವಸ್ಥೆಯನ್ನೇ ಒತ್ತಾಯಿಸುವಂಥವು. ಅಂದರೆ ಬಿಡಿವ್ಯಕ್ತಿ 'ಪೂರ್ಣದೊಳಗಿನ ಒಂದು ಅಂಶ' ವಷ್ಟೇ ಎನ್ನುವ ತಾತ್ವಿಕತೆ ಇದು.

ತಾಯಿ-ಮಗು ಎರಡೂ ಒಂದಕ್ಕೊಂದು ಬೆಸೆದುಕೊಂಡ ಗರ್ಭಾವಸ್ಥೆಯೇ ದೈವತಾರಾಧನೆಗೆ ಕಟ್ಟಿ ಬೆಳೆಸಲಾದ ಶಿಲ್ಪಕಲೆಯಲ್ಲೂ ಕಾಣಿಸಿಕೊಂಡಿದೆ. ಹಿಂದೂ ದೇಗುಲಗಳಲ್ಲಿ ಮೂಲ ವಿಗ್ರಹವನ್ನು ಇಟ್ಟಿರುವ ಜಾಗ 'ಗರ್ಭಗೃಹ' ವೆಂದು ಕರೆಸಿಕೊಳ್ಳುತ್ತದೆ. ಈ ಸ್ಥಳಕ್ಕೆ ತಲುಪಲು ವ್ಯಕ್ತಿ ಹೋಗಬೇಕಾದ ದಾರಿ ಕಿರಿದಾದ ಕತ್ತಲು ಕತ್ತಲಾದ, ಒಂಟಿ ಬಾಗಿಲಿನ ಕೋಣೆಗಳ ಸರಣಿಯಾಗಿರುತ್ತದೆ. ಮುಖ್ಯ ವಿಗ್ರಹವನ್ನು ಎಂದೂ ಆ ಮೂಲಸ್ಥಾನದಿಂದ ಕದಲಿಸುವಂತಿಲ್ಲ, ಹೀಗೆ ದೇವರೊಂದಿಗೆ ವ್ಯಕ್ತಿ ಸೇರುವ ನೆಲೆ ತಾಯಿ ಅಥವಾ ತಾಯಿಯಂಥದೇ ಮಾದರಿಯಲ್ಲಿ ಕಲ್ಪಿತವಾದ ವಿಶ್ವಾತ್ಮಕ ಶಕ್ತಿಯೊಂದಿಗೆ ಏಕೀಭವಿಸುವ ರೀತಿಯದಾಗಿರುತ್ತದೆ.

ಭಾರತೀಯ ಜನಾಂಗಗಳು ಮಕ್ಕಳನ್ನು ಪಾಲಿಸುವ ರೀತಿಗಳು ಕೂಡ ಮಗು ತಾಯಿಯೊಂದಿಗೇ ತನ್ನನ್ನು ಸಮೀಕರಿಸಿಕೊಂಡಿರುವ ರೀತಿಯನ್ನೇ ಪ್ರಬಲಗೊಳಿಸುವಂತಿರುತ್ತವೆ. ಮನೋ ವಿಶ್ಲೇಷಣಾ ತಜ್ಞರು ಈ ಸ್ಥಿತಿಯನ್ನು ಈಡಿಪಸ್ ಕಾಂಪ್ಲೆಕ್ಸ್ ಗೂ ಮುಂಚಿನ ಶೈಶವದ ಸ್ಥಿತಿಯೆಂದು ಹೇಳುತ್ತಾರೆ. ಈ ಸ್ಥಿತಿಯಲ್ಲಿ ತಂದೆ ಶಿಶುರಕ್ಷಣೆಯಲ್ಲಿ ವಹಿಸುವ ಪಾತ್ರ ತಂದೆತನದ ಛಾಪನ್ನು ಮಗುವಿನ ಮನದ ಮೇಲೆ ಮುದ್ರೆ ಒತ್ತದೆ ದೂರವೇ ಉಳಿದಿರುತ್ತದೆ. ವಾಸ್ತವದಲ್ಲಿ ಭಾರತದಲ್ಲಿ ಬಹಳಷ್ಟು ಸಂಸ್ಕೃತಿಗಳಲ್ಲಿ ತಂದೆಯಾದವನು ಮಗುವಿನಿಂದ ದೂರವೇ ಉಳಿದಿರುವುದೆ ಜೀವನದ 'ಸರಿ'ಯಾದ ಪರಿಪಾಠಿ ಅನ್ನಿಸಿಕೊಳ್ಳುತ್ತದೆ ಎನ್ನುವುದು ಕೇವಲ ಆಕಸ್ಮಿಕವಲ್ಲ. ಇಡೀ ವ್ಯವಸ್ಥೆ ಮಾತೃಪ್ರಧಾನವೇ ಆಗಿದ್ದಾಗ ಹೀಗೆ ತಾಯಿಯೇ ಸರ್ವಸ್ವವಾಗಿರುವ ಸ್ಥಿತಿಯು ವ್ಯಕ್ತಿಯ ಬೆಳವಣಿಗೆಯಲ್ಲಿ ಯಾವ ವೈರುಧ್ಯವನ್ನೂ ಹುಟ್ಟಿಸದೆ ಇರಬಹುದು. ಆದರೆ ಸಾಮಾಜಿಕ ವ್ಯವಸ್ಥೆಯು ಪಿತೃಪ್ರಾಧಾನ್ಯದತ್ತ ಬೆಳೆಯುತ್ತ ಹೋದಂತೆ ತಂದೆಯ ಸಾಂಸ್ಕೃತಿಕ ಸಂಕೇತ ಬಲಗೊಳ್ಳುತ್ತದೆ, ಅದು ಹೆಚ್ಚು ಹೆಚ್ಚು ಅಧಿಕಾರ ಪಡೆದುಕೊಳ್ಳುತ್ತದೆ. ತಂದೆಯೇ ದೇವರ ಸ್ಥಾನವನ್ನು ಆಕ್ರಮಿಸತೊಡಗಿದಂತೆಲ್ಲ ಸಮುದಾಯದ ಸುಪ್ತಪ್ರಜ್ಞೆಯಲ್ಲಿ ಮೊದಲಿನಿಂದ ಬೇರೂರಿದ ಅಮ್ಮನ ಸಂಕೇತದ ಅರ್ಥ ಹೊಯ್ದಾಡಲು ತೊಡಗುತ್ತದೆ. ಅಂದರೆ ಕೇವಲ ಒಳಿತಷ್ಟೇ ಆಗಿದ್ದ ಅಮ್ಮ ಈಗ ಕೆಲವು ಸಲ ಕೆಡುಕನ್ನೂ ಪ್ರತಿನಿಧಿಸುವಂತೆ ಕಲ್ಪಿತಳಾಗಬಹುದು. ಹುಟ್ಟಿಗೆ ಹೇಗೋ ಹಾಗೆಯೇ ಸಾವಿಗೂ ಯೋನಿಯೇ ಸಂಕೇತವಾಗಬಲ್ಲದು. ಇರುವಿಕೆ-ಇಲ್ಲದಿರುವಿಕೆಗಳ ಎರಡರ ನಡುವಿನ ಹಾದಿಯಾದ ಯೋನಿ, ತಾಯಿಯು ಜೀವದಾಯಕಶಕ್ತಿ ಎನಿಸಿದಾಗ ಬೆಳಕಿಗೆ, ವಿಸ್ತಾರಕ್ಕೆ ಹೊರತರುವ ಪ್ರಕ್ರಿಯೆಗೆ ಸಂಕೇತವಾಗುತ್ತದೆ; ಅದೇ ತಾಯಿ ವಿನಾಶಕ್ಕೆ ಪ್ರತೀಕವಾದಾಗ ಜೀವ ಮಾರಾಕ 'ಕತ್ತಲೆ' ಯ ಕೂಪವಾಗಿ ಕಾಣಿಸುತ್ತದೆ ಯೋನಿ. ಇಲ್ಲೇ ಸ್ವರ್ಗ, ಇಲ್ಲೇ ನರಕ, ಕತ್ತಲೆಯು ಎಲ್ಲವನ್ನೂ ತನ್ನೊಳಕ್ಕೇ ಸೆಳೆದುಕೊಂಡುಬಿಡುವ 'ಲಯ'ದ ಸಂಕೇತವಾಗಿದ್ದರೆ ಬೆಳಕು ಹೊರಲೋಕಕ್ಕೆ ಕರೆತಂದು ಬಿಡುವ 'ಸೃಷ್ಟಿ'ಯನ್ನು ಪ್ರತಿನಿಧಿಸುತ್ತದೆ. ಹೀಗೆ ಭಾರತೀಯ ಮನಸ್ಸು ಕಲ್ಪಿಸುವ ಸೃಷ್ಟಿ-ಲಯಗಳ ಆಧ್ಯಾತ್ಮಿಕ ಪರಿಕಲ್ಪನೆಗಳ ಮೂಲದಲ್ಲಿ 'ಅಮ್ಮ'ನಿದ್ದಾಳೆ.

ತಾಯ್ತನದ ಬಹುಮುಖಿ ಲಕ್ಷಣಗಳೇ ಹಿಂದೂ ಪುರಾಣಗಳ ನೂರಾರು 'ಅಮ್ಮ'ಗಳಾಗಿ ಮೈಪಡೆದಿವೆ. ಹಾಲೂಡುವ ತಾಯಿಯೇ ವಿಸ್ತಾರಗೊಂಡು ತಾವರೆ ಮೇಲೆ ನಿಂತು ಅನ್ನದ ಪಾತ್ರೆ ಕೈಲಿ ಹಿಡಿದು ಲೋಕಕ್ಕೆಲ್ಲಾ ಉಣಬಡಿಸಬಲ್ಲ ಅನ್ನಪೂರ್ಣೆಯಾಗಬಹುದು. ಅಥವಾ ಬಯಸಿದ್ದೆಲ್ಲವನ್ನೂ ನೀಡುವ 'ಕಾಮಧೇನು'ವಾಗಿ ಶಾಶ್ವತವಾಗಿ 'ಕ್ಷೀರದಾಯಿನಿ' ಸ್ಥಿತಿಯನ್ನೇ ಸೂಚಿಸುತ್ತಲೂ ಇರಬಹುದು.

ಹಿಂದೂ ಮತಗಳ ದೇವಿಯರು ಎಲ್ಲರಲ್ಲೂ 'ಅಮ್ಮ'ನ ತನವೇ ಅಂತರ್ಗತವಾಗಿದ್ದು, ಆಯಾ ದೇವಿಯರ ಕಾರ್ಯಕ್ಷೇತ್ರದಲ್ಲೂ ತನ್ನ ಗುಣವನ್ನು ಬಿತ್ತರಿಸುತ್ತಿರುತ್ತಾಳೆ. ಅಂದರೆ ಆಹಾರ ಕೊಟ್ಟು

ಕಾಪಾಡುವ ಶಕ್ತಿಯಷ್ಟೇ ಆಗಿದ್ದಾಕೆ ಈಗ ಸಕಲ ಲೋಕಕ್ಕೂ ಜೀವದಾಯಿನಿಯಾಗಿ, ಎಲ್ಲವನ್ನೂ ಪೋಷಿಸುವ ಭರವಸೆಯಾಗಿ, ತಾನೇ ಎಲ್ಲೆಲ್ಲೂ ಇದ್ದು ಆ ವಿಶ್ವಾಸವನ್ನು ಬಲಪಡಿಸುವ ವಿಶ್ವತತ್ವವಾಗುತ್ತಾಳೆ. ಆಕೆಯು ಭರವಸೆ, ಕ್ಷೇಮಗಳ ಭಾವನೆಗಳನ್ನು ಸಂಕೇತಿಸತೊಡಗಿದಾಗ ವಿವಿಧ ದೇವಿಯರ ಆಕೃತಿ ಪಡೆದುಕೊಳ್ಳುತ್ತಾಳೆ. ಐಶ್ವರ್ಯ, ಸುಖ, ಸಮೃದ್ಧಿ ಅದೃಷ್ಟಗಳನ್ನು ಪ್ರತಿನಿಧಿಸುವ 'ಲಕ್ಷ್ಮಿ' ಮಾನವರಿಗೆ ಒಲಿದಾಗ ಅವರೊಂದಿಗ 'ನೆಲೆಸಿರುವ' ಗ್ರಹಿಕೆ, ಮುನಿದಾಗ ಅವರನ್ನು 'ತ್ಯಜಿಸಿ' ಬಿಡುವ ಭಾವನೆ ಇಲ್ಲಿದೆ. 'ಸರಸ್ವತಿ' ಅರಿವು/ಜ್ಞಾನದ ಅಧಿದೇವತೆಯಾಗಿ ಅಮ್ಮ-ಮಗುವನ್ನು ಸಾಂತ್ವನಗೊಳಿಸುವ ಶಕ್ತಿಗೆ ಪ್ರತಿನಿಧಿಯಾಗುತ್ತಾಳೆ. ಶೈಶವದ ಮೂಲಭೂತ ದಿಗಿಲುಗಳಲ್ಲಿ ಒಂದಾದ ಕತ್ತಲನ್ನು (ಅಂಧಕಾಸುರ!) ಸಂಹರಿಸಿದ ಪಾರ್ವತಿ ಕೆಲವು ಸಲ ಒಳಿತನ್ನೂ ಮತ್ತೆ ಕೆಲವು ಸಲ ಕೆಡುಕನ್ನೂ ಸೂಚಿಸುವ 'ಗೌರಿ'-'ಕಾಳಿ' ಯರ ಮಾದರಿಗಳಲ್ಲಿ ಪ್ರಕಟಗೊಳ್ಳುತ್ತಾಳೆ !

ಹೀಗೆ 'ಅಮ್ಮ'ನೇ 'ಗುಮ್ಮ'ನೂ ಆಗಿಬಿಟ್ಟ ವಿಪರ್ಯಾಸ ಭಾರತದ ಸಂಸ್ಕೃತಿಯೊಳಗಿದೆ. ಎಲ್ಲಿ ಏಕೀಭವಿಸುವ / ತಾದಾತ್ಮ್ಯದ ಪರಿಕಲ್ಪನೆ ಅತಿ ತೀವ್ರವಾಗಿ ಬೆಳೆದಿರುತ್ತದೋ ಅಲ್ಲೇ ಈ ಕಲ್ಪನೆಯ ತಾರ್ಕಿಕವಾದ ವಿರೋಧಿತತ್ವ ಕೂಡ ಬೆಳೆದಿರಲೇ ಬೇಕು ಎನ್ನುವ ಲಕಾನ್‌ನ ಪರಿಭಾಷೆಯನ್ನು ಅನ್ವಯಿಸಿಕೊಂಡಾಗ ಹೇಗೆ ಈ ರೀತಿಯ ಒಳವಿರೋಧ ಸಾಧ್ಯ ಎಂಬುದು ಮನದಟ್ಟಾಗಬಲ್ಲದು. ಅತ್ಯಂತ ಆದರ, ಗೌರವ ಪ್ರೀತಿಗಳ ಭಾವನೆಗೆ ಕೇಂದ್ರವಾಗಿರುವ ಮಾತೃತ್ವದ ಜೊತೆಗೇ ಮುಟ್ಟಾಗುವಿಕೆ, ಹೆರಿಗೆಗಳಸುತ್ತಲೂ ಹೇಸಿಗೆ, ಮೈಲಿಗೆ, ಸೂತಕದ ಭಾವನೆಗಳೂ ಬೆಳೆದುಬಂಧವು. ಒಂದು ಕಡೆ ತಾಯ್ಗಂಡತನ ಮಾತೃ ಘಾತಕತನ ಮತ್ತು ಅದರ ಮಗ್ಗುಲಲ್ಲೇ ತಾಯಿಯ ದೈವೀಕರೂ ಜೊತೆಗೂಡಿರುತ್ತದೆ. (ಪರಶುರಾಮ - ರೇಣುಕಾ - ಎಲ್ಲಮ್ಮನ ಕಥೆ ಇದರ ಸ್ಪಷ್ಟ ಉದಾಹರಣೆ).

ಈ ಅಮ್ಮ-ಗುಮ್ಮನಾದದ್ದು ನಮ್ಮ ಸಂಸ್ಕೃತಿಯಲ್ಲಿ ಜನಜೀವನದಲ್ಲಿ ಹೇಗೆ ಕಾಣಿಸಿಕೊಳ್ಳುತ್ತದೆಂದು ನೋಡೋಣ.

ಭಾರತೀಯ ಸಮಾಜಗಳಲ್ಲಿ ಸ್ತ್ರೀಯರು ಅರ್ಥ ಅಥವಾ ನಿರ್ವಚನ ಪಡೆದಿರುವುದು ಮಗಳ, ತಾಯಿ, ಪತ್ನಿ, ಅಕ್ಕ ತಂಗಿ ಮುಂತಾಗಿ ಗಂಡಸರೊಂದಿಗಿರುವ ಕೌಟುಂಬಿಕ ಸಂಬಂಧಗಳ ಮೂಲಕವಾಗಿ, ಉಳಿದೆಲ್ಲಾ ಸಂಬಂಧಗಳಿಗಿಂತ ತಾನು ಒಬ್ಬ 'ತಾಯಿ' ಯಾಗುವುದು ಹೆಣ್ಣನ್ನು ಅತ್ಯಂತ ಎತ್ತರದ ನೆಲೆಯಲ್ಲಿ ಸ್ಥಾಪಿಸುವ ಸೌಕರ್ಯ ಈ ವ್ಯವಸ್ಥೆ ನೀಡಿದೆ. ಆದ್ದರಿಂದ ಬೇರೆಯಾವುದೇ ಮಾನವೀಯ ಸಂಬಂಧದಿಂದಲೂ ಆಕೆ ಪಡೆದುಕೊಳ್ಳಲು ಸಾಧ್ಯವಾಗದಂಥ ವಿಶಿಷ್ಟವಾದ ಗುರಿ/ಅರ್ಥ ಹೆಣ್ಣಿಗೆ ಸಿಗುವುದಾದರೆ ಅವಳು ತಾಯಿಯಾದಾಗಲೇ ಎಂಬ ನಂಬಿಕೆ ಸರ್ವವ್ಯಾಪಿಯಾಗಿ ಬೇರೂರಿದೆ. ಪ್ರಜ್ಞಾಪೂರ್ವದ ಸ್ಥಿತಿಯಲ್ಲಿ ಸ್ವಂತ ತಾಯಿಯ ಸಂಕೇತ ಹೆಣ್ಣಿನ ಮನದಲ್ಲಿ ಮುದ್ರೆಯೊತ್ತಿರುತ್ತದೆ. ತಾನೂ ತಾಯಿಯಾದಾಗ ಮನದಾಳದ 'ಅಮ್ಮ'ನಿಗೆ ಅರ್ಥ ಹುಟ್ಟಿಕೊಳ್ಳುತ್ತದೆ. ತನ್ನ ಒಳಗಿನ ನೈಜ ಗುಣವೇ ಈಗ ಬಹಿರಂಗವಾಗಿ ಆವಿಷ್ಕಾರಗೊಂಡಿತೆಂದೂ, ತನ್ನ ಸತ್ಯವನ್ನೇ ತಾನು ಸಾಕ್ಷಾತ್ಕರಿಸಿಕೊಂಡೆನೆಂದೂ ಧನ್ಯತೆಯು ಆಕೆಯನ್ನು ಆವರಿಸಬಲ್ಲದು. ಹೀಗೆ ಭಾರತೀಯ ತಾಯಂದಿರು ತಮ್ಮ 'ಸಂತಾನ'ದ ಮೂಲಕ ಗಳಿಸಿಕೊಳ್ಳುವ 'ಮಾತೆ'ಯ ಅಂಕಿತದಿಂದ ತುಂಬ ಹೆಮ್ಮೆಯನ್ನು ಅನುಭವಿಸುತ್ತಾರೆ ಆ ಸಂತಾನವು ಗಂಡಾದರಂತೂ ಮಾತೆಯ ಆದಿಪ್ರತೀಕವೇ ಹರಳುಗಟ್ಟಿಹೊಳೆಯ ತೊಡಗುತ್ತದೆ ! ತಾನೇ ಜೀವ ಕೊಟ್ಟ ಈ ಮಗ ಮುಂದೆ ತನ್ನ ರಕ್ಷಕನಾಗುವವ. ಆದ್ದರಿಂದ ಆ ಗಂಡು ಮಗುವನ್ನು ಕಾಪಾಡುವಲ್ಲಿ ವಿಶೇಷ ಧನ್ಯತೆ ಆಕೆ ಅನುಭವಿಸಿದರೆ ಅದು 'ಸಹಜ'.

ಕುಟುಂಬದೊಳಗೂ ಸಮಾಜದೊಳಗೂ ಎಡಬಿಡಂಗಿಯಾಗಿದ್ದ ಹೆಣ್ಣಿನ ಅಸ್ತಿತ್ವಕ್ಕೆ ದೃಢವಾದ ನೆಲೆಯನ್ನು ಖಚಿತವಾದ ಗೊತ್ತು ಗುರಿಯನ್ನು ದೊರಕಿಸಿಕೊಡುವ ಮಗನನ್ನು ಗೌರವ, ಪ್ರೀತಿ, ಕೃತಜ್ಞತಾಭಾವದಿಂದ, ಅಕ್ಕರೆಯಿಂದ ಆಕೆ ಕಂಡರೆ ಅಚ್ಚರಿ ಎಲ್ಲಿದೆ? ತನ್ನದೇ ಹೆಣ್ಣು ಸಂತಾನಕ್ಕಿಂತ ಗಂಡು ಸಂತಾನದ ಕಡೆಗೆ ತಾಯಿಯ ಒಲವಿನ ತಕ್ಕಡಿ ಬಾಗಿಬಿಡುವುದಕ್ಕೆ ಈ ಸಂಸ್ಕೃತಿಯಲ್ಲಿ ಖಂಡಿತ ಅರ್ಥವಿಲ್ಲದೆ ಇಲ್ಲ. ಆದರೆ ಮಗುವನ್ನು ನೋಡಿಕೊಳ್ಳುವ ಗಳಿಗೆಯಲ್ಲಿ ತಾಯಿಯಾದವಳ ಮನಸ್ಸು ಎಷ್ಟೊಂದು ಕಾರಣಗಳಿಂದ ಪ್ರಭಾವಿತವಾಗಿರಬಹುದು ಎಂದರೆ ಅಪ್ರಜ್ಞಾಪೂರ್ವಕವಾಗಿ ತನ್ನೊಳಗೆ ಈಡೇರದೆ ಉಳಿದುಬಿಟ್ಟ ಆಸೆ,ಆಕಾಂಕ್ಷೆ, ಬೇಡಿಕೆಗಳೆಲ್ಲಕ್ಕೂ ಆ ಮಗುವೇ ಒಂದು ಸಾಧನವೆಂಬಂತೆ ಆಕೆಗೆ ಕಾಣಿಸಬಹುದು. ತಾಯಿಯನ್ನು ತಾನು ಕಾಪಾಡಲೇ ಬೇಕು ಎಂಬ 'ರಕ್ಷಕ' ಭಾವಕ್ಕೆ ಮಗನ ವರ್ತನೆಗಳನ್ನು ಆಕೆ ತನಗೇ ಅರಿವಿರದ ಅಪ್ರಜ್ಞಾಪೂರ್ವಕ ರೀತಿಗಳಿಂದ ಒತ್ತಾಯಿಸುತ್ತಲೂ ಇರಬಹುದು. ಅಮ್ಮನ ಸುಪ್ತಪ್ರಜ್ಞೆಯ ನೆಲೆಯಿಂದ ಸಂವಹನೆಯಾಗುವ ಈ ಹಕ್ಕೊತ್ತಾಯಗಳ ತರಂಗಗಳು ಮಗನನ್ನು ಗೊಂದಲ, ಅಸಹಾಯಕತೆ, ಅಸಾಮರ್ಥ್ಯದ ಭಾವನೆಗಳಿಗೂ ಗುರಿಮಾಡಬಲ್ಲವು. ಮಾತಿನಲ್ಲಿ ಎಲ್ಲೂ ಎಂದೂ ನೇರವಾಗಿ ವ್ಯಕ್ತವಾಗಲಾರದ ಅಮ್ಮನ ಮನದಾಳದ ಅಪೇಕ್ಷೆಗಳು

ಮೌನತರಂಗಗಳಾಗಿ ತುಂಬ ಬಲವಾದ ಅಸ್ತ್ರಗಳೂ ಆಗಿಬಿಡಬಲ್ಲದು.

ತಾಯಿಯನ್ನೇ ಹಚ್ಚಿಕೊಂಡು, ಆಕೆಗೇ ತನ್ನನ್ನು ಮುಡಿಪಿಟ್ಟುಕೊಂಡಂತೆ ಬದುಕುವುದು ಒಂದು ಹಂತದವರೆಗೆ ತುಂಬ ಆಪ್ಯಾಯಮಾನ. ಆದರೆ ಬೆಳೆದಹಾಗೆಲ್ಲ ಆಕೆ ತನ್ನತನವೆಂಬುದನ್ನೇ ನುಂಗಿಹಾಕಬಲ್ಲ ಪ್ರಬಲ ಶಕ್ತಿಯಾಗಿ ಅವನನ್ನು ಕಾಡಬಹುದು. ಆದರೂ ಆಕೆಯ ಪ್ರಭಾವದಿಂದ ಬಿಡುಗಡೆ ಪಡೆಯಲಾರದೆ ಅಥವಾ ಬೇರೆಯಾಗಲು ಬಯಸದೆಯೂ ಇರುವ ಸ್ಥಿತಿಯನ್ನು ಮಗನು ಎದುರಿಸುತ್ತಿರಬಹುದು. ಈ ಇಬ್ಬಂದಿಯ ಸ್ಥಿತಿಯಲ್ಲಿ ಸುಪ್ತಪ್ರಜ್ಞೆಯೊಳಗಿನ ತಾಯಿ ಪ್ರತೀಕಕ್ಕೆ ಕೇಡಿಗತನದ ರೂಪು ದೊರಕುತ್ತದೆ. ಪರಿಣಾಮವಾಗಿ ಅಮ್ಮನೊಂದಿಗೆ ಬೆಳೆದುಕೊಂಡಿರುವಿಕೆ ಪರಾಧೀನತೆ, ಅಸ್ತಿತ್ವವನಾಶದ ಹೆದರಿಕೆಗೆ ಕಾರಣವಾಗಿದ್ದರೆ ಆಕೆಯಿಂದ ವಿಘಟಿತವಾಗುವಿಕೆ ಶೂನ್ಯತೆ, ಹತಾಶ ಸ್ಥಿತಿಗಳನ್ನು ಉಂಟುಮಾಡಬಹುದು.

ಹಿಂದೂ ಸಮಾಜಗಳೊಳಗೆ ಗಂಡು ಮಗುವಿಗೆ ತಾಯಿಯಾದವಳು ಪಡೆವ ಖಚಿತವಾದ ಅಂಕಿತ, ಅಸ್ಮಿತೆ, ಬದುಕಿನ ಗೊತ್ತುಗುರಿಗಳಿಂದಾಗಿ ಬೇರಾವ ಮಾನವ ಸಂಬಂಧಕ್ಕಿಂತ ಹೆಚ್ಚು ಬಲಿಷ್ಠ ಸಂಬಂಧವೆಂದರೆ ತಾಯಿ-ಮಗನ ಸಂಬಂಧವೆಂದೇ ಆಗಿಬಿಟ್ಟಿದೆ. ಬ್ರಾಹ್ಮಣಸಮುದಾಯದಲ್ಲಂತೂ ತಂದೆ-ತಾಯಿಗಳ ಅಂತ್ಯಸಂಸ್ಕಾರದ ಉತ್ತರಾಧಿಕಾರಿ ಮಗನೇ ಆದುದರಿಂದ 'ಪುಕ್' ನರಕದಿಂದ ಪಾರು ಮಾಡಬಲ್ಲ ಪುತ್ರರು ಎಂಟು ಜನರಾದರೂ ಇರಲಿ ಎಂದು 'ಅಷ್ಟ ಪುತ್ರಾಭವ' ಎಂದು ಹೆಣ್ಣುಮಕ್ಕಳಿಗೆ ಆಶೀರ್ವದಿಸುತ್ತಿದ್ದರು. ಇಂದಿನ ಬದಲಾದ ಜೀವನದ ಸ್ಥಿತಿಯಲ್ಲಿ ಈ ವಾಕ್ಯ ಇಲ್ಲವಾಗಿದ್ದರೂ ಅದರ ಮೂಲದ ಭಾವನೆ ಇನ್ನೂ ಇಲ್ಲವಾಗಿಲ್ಲ.

ಗಂಡು ಸಂತಾನವನ್ನು ಕೌಟುಂಬಿಕವಾಗಿ ರವಾನೆಯಾಗುವ ಅಧಿಕಾರವೊಂದರ ಸಂಕೇತವೆಂಬಂತೆ ಭಾವಿಸುವುದು ಇಂದಿಗೂ ಸಮಾಜದಲ್ಲಿ ನಶಿಸಿಹೋಗದೆ ಉಳಿದಿದೆ. ಇದರಿಂದಾಗಿಯೇ ಇತರ ಸಂಬಂಧಗಳು ನಿರ್ಧರಿತ-ವಾಗುತ್ತಿರುತ್ತವೆ. ಈ ವಿಷಯವಾಗಿ ಪಶ್ಚಿಮದ ಪಿತೃಪ್ರಾಧಾನ್ಯವೇ ಏಕಾಧಿಕಾರ ಪಡೆದ ಸಂಸ್ಕೃತಿಯ ಹಿನ್ನೆಲೆಯಲ್ಲಿ ರೂಬೆನ್ ಎಂಬಾಕೆ ಹೇಳುವ ವಿಚಾರವನ್ನು ಗಮನಿಸಬಹುದು. ಆಕೆ ಹೇಳುವ ಹಾಗೆ "ಅಂಗ ಎನ್ನುವುದು ಗಂಡಿನೊಂದಿಗೂ ಅದರ ಅಭಾವವು ಹೆಣ್ಣಿನೊಂದಿಗೂ ಸಮೀಕರಣಗೊಂಡದ್ದರಿಂದ ಸ್ತ್ರೀಗೆ ಆಂತರಿಕವಾದ, ಎಂದೂ ಪರಿಹಾರಕಾಣದ ಒಳವಿರೋಧದ ಭಾವನೆಗಳು ಎದುರಾಗುತ್ತವೆ. ಅವು ಅವಳನ್ನು ಒಳಗಿನಿಂದಲೇ ನಿಯಂತ್ರಿಸುವ ಈ ಶಕ್ತಿ ಪುರುಷನದಾಗಿರಲು ಸಾಧ್ಯ. ಪ್ರಜ್ಞಾಪೂರ್ವಕ ನೆಲೆಯಲ್ಲಿ ಇದುಯಾವುದೂ ಜರುಗದಿದ್ದರೂ ಮಗುವಿನೊಂದಿಗೆ ತಾಯಿ ಇಬ್ಬಗೆಯ ಕಾಲ್ಪನಿಕ ಬಂಧನದಲ್ಲಿ ಉಳಿಯುವಂತೆ ಇದು ಮಾಡುತ್ತಿರುತ್ತದೆ. ಲಿಂಗಾಧಾರಿತ ಶ್ರಮವಿಭಜನೆಯು ಮಗುವಿನ ಎಲ್ಲ ಹೊಣೆಗಾರಿಕೆಯನ್ನು ಹೆಣ್ಣಿನ ಮೇಲೆ ಹೇರಿರುತ್ತದೆ. ಒಂದೆಡೆ ತಾಯ್ತನ ಆರಾಧ್ಯವಸ್ತುವಾಗಿ ಉದಾತ್ತೀಕರಣಕ್ಕೆ ಒಳಗಾಗುತ್ತಿದ್ದರೆ ಇನ್ನೊಂದೆಡೆ ವಾಸ್ತವ ಬದುಕಿನಲ್ಲಿ ಪುರುಷನ ಸ್ವಾಮ್ಯಕ್ಕೆ ತನ್ನನ್ನು ಒಪ್ಪಿಸಿಕೊಳ್ಳುವ ಕ್ರಿಯೆಗಳನ್ನು ಆಕೆಯೇ ಮುಂದುವರೆಸುವಂತೆ ಹೆಣ್ಣಿನ ನಿರ್ವಚನ ಅದೇ ಸಂಸ್ಕೃತಿ ಸಾಧಿಸಿರುತ್ತದೆ. ಎರಡೂ ಲಿಂಗಗಳ ವ್ಯಕ್ತಿಗಳು ಶಿಶುಸಂಗೋಪನದ ಜವಾಬ್ದಾರಿಯನ್ನು ಹಂಚಿಕೊಳ್ಳುವ ರೀತಿಯಲ್ಲಿ ಶ್ರಮವಿಭಜನೆ ಇದ್ದ ಪಕ್ಷದಲ್ಲಿ ಮಗುವಿನ ಮನದಲ್ಲಿ ಮೊಟ್ಟಮೊದಲು ಮೂಡುವ ಆಯ್ಕೆಯೂ ದ್ವಿಲಿಂಗಾತ್ಮಕವಾಗಿರುತ್ತಿತ್ತು. ಹಾಗೆಯೇ ದ್ವಿಲಿಂಗಾತ್ಮಕ ಸಂಬಂಧ ಕಡ್ಡಾಯವಲ್ಲದ ಸಾಮಾಜಿಕ ಸ್ಥಿತಿ ಇದ್ದಿದ್ದರೆ ತಾಯಿಯ ಬಗೆಗಿನ ತನ್ನ ಪ್ರೇಮವನ್ನು ಹತ್ತಿಕ್ಕಿಕೊಳ್ಳುತ್ತಲೇ ತನ್ನತನವನ್ನು ಪುರುಷನ ಮೂಲಕ ಸಾಧಿಸಬೇಕಾದ ಒತ್ತಾಯ ಹೆಣ್ಣುಮಗುವಿಗೆ ಇರುತ್ತಿರಲಿಲ್ಲ ಸ್ತ್ರೀ ಪುರುಷರಿಬ್ಬರೂ ಪೌರುಷವನ್ನೇ ಆರಾಧಿಸುವ ಪುರುಷತ್ವದ ಪರಮಾಧಿಕಾರದ ವ್ಯವಸ್ಥೆಯೂ ಬೆಳೆಯುತ್ತಿರಲಿಲ್ಲ" ಎಂದು ರೂಬೆನ್ ಪ್ರತಿಪಾದಿಸುತ್ತಾರೆ.

ಆದರೆ ಪಿತೃಸಂಸ್ಕೃತಿ ಏಕಾಕಾರವಾಗಿ ಬೆಳೆದಂಥ ಪಶ್ಚಿಮದ ಸಮಾಜಗಳಿಗೆ ಅನ್ವಯಿಸಬಹುದಾದ ಆಕೆಯ ವಿಚಾರಗಳು ಭಾರತೀಯ ಪರಿಸರದಲ್ಲಿ ಅಷ್ಟು ನೈಜವೆಂದು ತೋರಲಾರವು. ಏಕೆಂದರೆ ಲೈಂಗಿಕತೆಯನ್ನು ಏಕಾಂಗಕೇಂದ್ರಿತ ನೆಲೆಯಲ್ಲಿ ಪರಿಭಾವಿಸದೆ ಭಾರತೀಯ ಚಿಂತಕರು ಅದು ಪದರ ಪದರವಾಗಿ ಹರಡಿಕೊಂಡ ಬಹುರೂಪದ್ದೆಂದು ಕಲ್ಪಿಸಿದರು. ಲೈಂಗಿಕಾನುಭವ ಎಂಬುದು ಜನನೇಂದ್ರಿಯಕ್ಕಷ್ಟೇ ಕೇಂದ್ರಿತವೆನ್ನುವ ದೃಷ್ಟಿಕೋನವು ಲೈಂಗಿಕ ಸಂದೇಶಗಳ ಬಹುಸ್ತರಗಳನ್ನು ನಿರಾಕರಿಸುವುದಷ್ಟೇ ಅಲ್ಲದೆ ನಿಷೇಧಿತವೆಂದು ಕೆಲವು ಸಂಬಂಧಗಳನ್ನೇ ಗುಡಿಸಿ ಹಾಕುತ್ತವೆ. ಆದರೆ ಭಾರತದಲ್ಲಿರುವ ಒಂದು ಸಾಂಸ್ಕೃತಿಕ ವೈಶಿಷ್ಟ್ಯವು ಮನುಷ್ಯರ ಯಾವೊಂದು ಪ್ರವೃತ್ತಿಯನ್ನೂ ಇರಲೇಬಾರದು ಎಂದು ಹೇಳದೆ, ಲೈಂಗಿಕತೆಯ ಬಹುಮುಖ ಧೋರಣೆಗಳು ಒಟ್ಟೊಟ್ಟಿಗೇ ಇರುವುದನ್ನು ಮಾನ್ಯಮಾಡುತ್ತದೆ ಎಂಬುದನ್ನು ಗಮನಿಸಬೇಕು.

ಆದರೆ ಜಾತಿಶ್ರೇಣೀಕರಣದಲ್ಲಿ ಮೇಲ್ಜಾತಿಗಳ ಮೌಲ್ಯಗಳಷ್ಟೇ 'ಸಂಸ್ಕೃತಿ' ಎಂದೂ, ಅದಕ್ಕೆ ಪರಕೀಯವಾದುದೆಲ್ಲವೂ 'ಪ್ರಾಕೃತಿಕ'ವೆಂದು ಒತ್ತರಿಸಲ್ಪಟ್ಟವು. ಮೇಲ್ಜಾತಿಯ ಸ್ತ್ರೀಯರಿಗೆ ಬೇರೆ ಬೇರೆ ಲೈಂಗಿಕ ಅಭಿವ್ಯಕ್ತಿ ಸ್ವಾತಂತ್ರ್ಯಗಳೆಲ್ಲವೂ

ಹತ್ತಿಕಲ್ಪಟ್ಟುದರಿಂದ ಅವರಿಗೆ ಸಾಮಾಜಿಕವಾಗಿ ಒಂದು ಅಂಕಿತವೇನಾದರೂ ಸಿಕ್ಕುವುದಿದ್ದರೆ ಗಂಡು ಮಗುವಿಗೆ ತಾಯಿಯಾಗುವ ಮೂಲಕವೇ ಅದು ಸಾಧ್ಯವಾಗಬೇಕಾಯಿತು.

ಭಾರತೀಯ ಕಮರ್ಶಿಯಲ್ ಚಲನಚಿತ್ರಗಳೂ, ದೂರದರ್ಶನದ ಅತಿಜನರಂಜಕ ಮೆಗಾ ಧಾರಾವಾಹಿಗಳೂ ಬಲವಾಗಿ ಬಿತ್ತರಿಸುತ್ತಿರುವ 'ತಾಯ್ತನ'ದ ವೈಭವೀಕೃತ ಮಾದರಿಗಳೆಲ್ಲ ಏಕೆ ಮೇಲ್ಜಾತಿಯ ಸಾಂಸ್ಕೃತಿಕ ಮಾನದಂಡದ್ದೇ ಆಗಿರುತ್ತವೆ ಎಂಬುದು ನಿಜಕ್ಕೂ ಕುತೂಹಲದ ಸಂಗತಿ. ತಂದೆ-ಗಂಡ-ಮಗನ ಮೂಲಕವಾಗಿ ಅಂಕಿತಗೊಳ್ಳುವ ಈ ಹೆಣ್ಣು ಮತ್ತೆ ಮತ್ತೆ ಅವೇ ಸಂಬಂಧಗಳಿಗೇ ತನ್ನನ್ನು ಬಂಧಿಸಿಕೊಳ್ಳುವುದೇ ಅವಳ ಬದುಕಿನ ಬಹುಮುಖ್ಯಗುರಿ ; ಗಂಡಿನೊಂದಿಗಿನ ಆ ಸಂಬಂಧಗಳ ಮೂಲಕ ಅವರ ಪ್ರೀತಿಯನ್ನೂ ಒಪ್ಪಿಗೆಯನ್ನೂ ಪಡೆಯುವುದೇ ಆಕೆಯ ಬಹುಮುಖ್ಯ ಅವಶ್ಯಕತೆ ಎಂಬುದನ್ನೇ ಈ ಎಲ್ಲ ಸಮೂಹ ರಂಜನೆಯ ಸಾಧನಗಳು ನಿರಂತರವಾಗಿ ಸಾರಿ ಸಾರಿ ಹೇಳುತ್ತವೆ.

ತಾಯಿತನದ ಬಹುವಾದ ವೈಭವೀಕರಣದ ನಡುವೆ ಕೂಡ ಅಧಿಕಾರದ ಒಟ್ಟು ರಚನೆಯಲ್ಲಿ ನೀಡುವ ನೆಲೆಯಲ್ಲಿ ಪುರುಷನನ್ನೂ, ಸ್ವೀಕರಿಸುವ ತುದಿಯಲ್ಲಿ ಸ್ತ್ರೀಯೂ ಇಲ್ಲಿದ್ದಾರೆ. ಹೀಗೆ ಸ್ವೀಕರಿಸಬೇಕಾದ ತುದಿಯಲ್ಲಿರುವ ವ್ಯಕ್ತಿಗೆ ತನ್ನ ಸಂಸ್ಕೃತಿ ಒತ್ತಾಯಿಸುವ / ನಿರೀಕ್ಷಿಸುವ ರೀತಿಯ 'ಒಳ್ಳೆಯ ತಾಯಿ' 'ಒಳ್ಳೆಯ ಪತ್ನಿ' ಆಗುವುದು ಸುಲಭಸಾಧ್ಯವಲ್ಲ. ನಮ್ಮಲ್ಲಿ ಮಹಿಳೆಯರಲ್ಲಿ ತೋರಿಬರುವ ತಮ್ಮನ್ನೇ ತಾವು ದ್ವೇಷಿಸುವ/ ಶೋಷಿಸುವಂಥ ಪ್ರವೃತ್ತಿಗಳು, ಅತ್ತೆ-ಸೊಸೆಯರ ದ್ವೇಷದ ಶಾಶ್ವತ ಮಾದರಿಗಳೂ ಮನೋ ವಿಜ್ಞಾನಿಗಳ ಅಧ್ಯಯನ/ ಸಂಶೋಧನೆಗೆ ಬಹುವಾಗಿ ವಸ್ತುಗಳಾಗಿರುತ್ತವೆ. ಆದರೆ ಈ ಹೆಂಗಸರೊಳಗಿನ ಪರಸ್ಪರ ದ್ವೇಷದ ಸ್ವರೂಪವನ್ನೇ ಅತಿಯಾಗಿ ಹಿಗ್ಗಿಸಿ ವಿಶ್ಲೇಷಣೆ ಮಾಡುವವರು ಸುಪ್ತಪ್ರಜ್ಞೆ ಅಪ್ರಜ್ಞೆಗಳ ಸ್ತರಗಳಲ್ಲಿ ಪ್ರೀತಿ-ದ್ವೇಷಗಳ ವೈರುಧ್ಯ ಸ್ತ್ರೀಯರಲ್ಲೂ ಪುರುಷರಲ್ಲೂ ಇರುತ್ತವೆ ಎಂಬುದನ್ನು ಮರೆಮಾಚಿ ಬಿಟ್ಟಿರುತ್ತಾರೆ. ಇಂಥ ಪ್ರೀತಿ-ದ್ವೇಷದ ಬಹುಸ್ಪಷ್ಟ ಉದಾಹರಣೆ ಭಾರತದಲ್ಲಿ ಎಲ್ಲೆಲ್ಲೂ ಕಾಣಸಿಗುವ 'ಆವೇಶ' ಅಥವಾ ಮೈ ಮೇಲೆ ಭೂತ ಬರುವ ರೀತಿಯ ಆರಾಧನಾ ಆಚರಣೆಗಳಲ್ಲಿ ಸಿಗುತ್ತದೆ. ಆದರೆ ಜಾತಿ ಸಂಘಟನೆಗಳ ಶಕ್ತಿ ಎಷ್ಟು ಬಲವಾದದ್ದು ಎಂದರೆ ಮೈಮೇಲೆ ಭೂತಾವೇಶ ಆಗುವುದನ್ನೂ, ಭೂತೋಚ್ಚಾಟನೆಯನ್ನೂ ಪ್ರಚಲಿತ ವ್ಯವಸ್ಥೆಯ ವಿರುದ್ಧದ ಪ್ರತಿಭಟನೆಯಾಗಿ ಗ್ರಹಿಸದೆ, ಜನರೊಳಗಿನ ದ್ವೇಷಾಗ್ನಿಯನ್ನು ಶಮನಗೊಳಿಸಿ, ಯಥಾಸ್ಥಿತಿಗೇ ಉಳಿಸಿಡುವ, 'ಮಾನಸಿಕ ಚಿಕಿತ್ಸೆ'ಯ ರೂಪದಲ್ಲೇ ಅವುಗಳನ್ನು ಭಾವಿಸುತ್ತಾ ಬರಲಾಗಿದೆ.

'ಹೆಣ್ಣಿಗೆ ಹೆಣ್ಣೇ ಶತ್ರು' ಎಂಬ ಅತ್ಯಂತ ಕ್ಲೀಷೆಯಾಗಿಹೋಗಿರುವ ಪೂರ್ವಾಗ್ರಹವು ಹೆಂಗಸರನ್ನು 'ಒಳ್ಳೆಯ ಹೆಣ್ಣು X ಕೆಟ್ಟಹೆಣ್ಣು' ಎಂಬ ದ್ವಿವಿಧವಾದ ನಾಟಕೀಯ ಸಂಘರ್ಷದ ಮಾದರಿಗಳೆಂಬಂತೆ ಕಟ್ಟಿಡುತ್ತಾ ಬಂದಿದೆ. ಹೀಗೆ ಚಿತ್ರಿಸಿ, ರೂಪಿಸುವ ವಿಷಯದಲ್ಲಿ ಜಾತಿಪದ್ಧತಿಯು, ಕುಟುಂಬ ವ್ಯವಸ್ಥೆಯೂ ಬಹು ಮುಖ್ಯಪಾತ್ರವಹಿಸುತ್ತವೆ. ಗಂಡನ ಮನೆಗೆ ಕಾಲಿಡುವ ಪ್ರತಿಯೊಬ್ಬ ವಧುವೂ ಆ ಮನೆಯ ಒಗ್ಗಟನ್ನು ಒಡೆಯುವ ಭೀತಿಯನ್ನು ಹುಟ್ಟಿಸುತ್ತಿರುತ್ತಾಳೆಂದೇ ಗ್ರಹಿಸಲಾಗುತ್ತದೆ. ಇಂಥ 'ಮನೆ ಮುರುಕ' ಶಕ್ತಿಯಾದ ಅವಳನ್ನು ಹಿಡಿತದಲ್ಲಿ ಇಟ್ಟುಕೊಳ್ಳುವ, ನಿಯಂತ್ರಿಸುವ ಪ್ರಕ್ರಿಯೆ ಅನಿವಾರ್ಯವಾಗಿ ಪ್ರಧಾನವಾಗಿ ಅತ್ತೆಯದೆನಿಸುತ್ತದೆ ಅಥವಾ ಅಂಥವೇ ಅಧಿಕಾರದಲ್ಲಿ ಮೊದಲೇ ಸ್ಥಾಪಿತರಾದ ಇತರ ಸ್ತ್ರೀಯರದೂ ಆಗಬಹುದು. ಹೊಸ ದಂಪತಿಗಳ ಪ್ರೀತಿಯ ಸ್ವಲ್ಪ ಅತಿರೇಕಕೂಡ ಇಡೀ ಕುಟುಂಬದ ಅಧಿಕಾರವನ್ನು ಬುಡಮೇಲು ಮಾಡಿಬಿಡುವ ಅಪಾಯಕರ ಶಕ್ತಿಯೆನಿಸಿಬಿಟ್ಟು, ಅದಕ್ಕೆಲ್ಲ ಮೂಲಕಾರಣವಾದ ಸೊಸೆಯು ಹತ್ತಿಕ್ಕಲ್ಪಡುವ ವಸ್ತುವಾಗುತ್ತಾಳೆ.

ಗಂಡಿನ ದೃಷ್ಟಿಯಿಂದ ತಾಯಿಯ ಪ್ರತೀಕಕ್ಕೆ ಅತಿಯಾಗಿ ಬೆಲೆಕೊಡುವಂಥ ಯಾವುದೇ ಸಾಮಾಜಿಕ - ಧಾರ್ಮಿಕ ಘಟನೆ/ ವಿಧ್ಯುಕ್ತ ಆಚರಣೆ ಎಲ್ಲಿಯ ವರೆಗೆ ಹೆಣ್ಣನ್ನು ಅವಮಾನಿಸುತ್ತಾ ಅವಳ ಅಭದ್ರತೆಯನ್ನು ತೀವ್ರಗೊಳಿಸುತ್ತದೋ ಅಲ್ಲಿಯವರೆಗೆ ತಾಯ್ತನದ ಆ ವೈಭವೀಕೃತ ಲಕ್ಷಣವು ಸಾಮಾನ್ಯ ಹೆಣ್ಣುಗಳಿಗೆ ಸ್ವಾತಂತ್ರ್ಯ ವನ್ನಾಗಲೀ ಸಬಲತೆಯನ್ನಾಗಲೀ ತಂದು ಕೊಡುವ ಜಾಗವಾಗುವುದಿಲ್ಲ. ಬದಲಾಗಿ ಅವರು ತಮ್ಮ ಕುಟುಂಬಕ್ಕೂ, ತಮ್ಮ ಸಮುದಾಯಕ್ಕೂ ಒಬ್ಬ ಮಗನನ್ನು ಕೊಡಲು ವಿಫಲರಾಗುತ್ತಿರುವ ವರೆಗೂ ಅವರ ಬದುಕಿಗೆ ಅಭದ್ರತೆ, ಅವಹೀನತೆಗಳು ತಪ್ಪಿದ್ದಲ್ಲ. ಅದೇ ಒಬ್ಬ ಅಂಥ ಹೆಣ್ಣು ಮಗನೊಬ್ಬನ ತಾಯಿ ಆದಾಗ ಅಸ್ತಿತ್ವರಹಿತ ಸ್ಥಿತಿಯಿಂದ ಸ್ಪಷ್ಟವಾದ ಅಸ್ಮಿತೆಯ ಕಡೆಗೆ ಸ್ಥಾನಾಂತರಗೊಳ್ಳುವ ಅವಕಾಶ ವ್ಯವಸ್ಥೆಯಲ್ಲಿ ದೊರೆಯುತ್ತದೆ. 'ಕಂದನ ಕೊಡು ಶಿವನೆ, ಬಂಗವ ಪಡಲಾರೆ' ಎಂಬ ಹೆಣ್ಣಿನ ಯುಗಯುಗದ ಅಳಲು ಅವಳ ಮಾನಸಿಕಪರಾಧೀನತೆಯನ್ನೇ ಮುಖ್ಯಲಕ್ಷಣವಾಗಿ ಹೊಂದಿರುವ ವ್ಯವಸ್ಥೆಯ ಪ್ರತಿ ಧ್ವನಿಯೇ ಆಗಿರುತ್ತದೆ. ಇಂಥ ಪರಿಸರವು ತನ್ನ ವಿರುದ್ಧವಾಗಿ ಏಳುವ ಯಾವುದೇ ಧ್ವನಿಯನ್ನು ಅಂಜಿಗೆ ಒತ್ತರಿಸುತ್ತದೆ ಇಲ್ಲವೆ ಪಿತೃಸಂಸ್ಕೃತಿಯ ಬಲವಾದ ಸಂಘಟಿತ ಶಕ್ತಿಗಳು ಆ ಧ್ವನಿಯನ್ನು ಹೊರಬರದಂತೆ ಕೊರಳು ಹಿಚುಕಿಬಿಡುತ್ತವೆ.

'ಪಾರಸ್ಪಾರಿಕ ಗೌರವಕ್ಕಿಂತ ಪ್ರೇಮದ ಭಾವುಕ ನೆಲೆಗೇ

ಬಲವಾಗಿ ಒತ್ತುಕೊಡುವುದು ಮತ್ತು ಮಾನವೀಯ ನ್ಯಾಯಕ್ಕೆ ಬದಲಾಗಿ ಜಾತಿ ಸಂಘಟನೆಗೇ ಒತ್ತು ಕೊಡುವ ರೀತಿಯ ವ್ಯವಸ್ಥೆಯಲ್ಲಿ ಕುಟುಂಬ, ಕುಲಗಳಂಥ ಸಂಸ್ಥೆಗಳೇ ಬದುಕಿನ ಬಲುಮುಖ್ಯ ಮೌಲ್ಯಗಳನ್ನು ರಚಿಸಿಟ್ಟಿರುತ್ತವೆ. (ಜಾತಿ, ಪ್ರತಿಷ್ಠೆ, ಕುಲದ/ಮನೆತನದ ಪಾವಿತ್ರ್ಯ ಇತ್ಯಾದಿ) ಇಂಥ ರಚನೆಗಳನ್ನು ಉಳಿಸಿಡಲಿಕ್ಕೆ ಕುಟುಂಬವು ಪ್ರೇಮ, ಮಾನಸಿಕ ಭದ್ರತೆಗಳ ಸಂತುಲನಗಳನ್ನು ಪ್ರಧಾನ ಸಾಧನಗಳನ್ನಾಗಿ ಬಳಸಿಕೊಳ್ಳುತ್ತದೆ. ಹಳೆಯ ಸಂರಚನೆಗಳೆಲ್ಲ ಕಿತ್ತು ಹರಿದು ಹೋಗುತ್ತಾ ಇರುವ ಆಧುನಿಕ ಜೀವನದ ತೀವ್ರವಾಗಿ ಬದಲಾಗುತ್ತಿರುವ ಪರಿಸರದಲ್ಲಿ ಸಂಘಟಿತವಾದ ಸಾಂಪ್ರದಾಯಿಕ ಬದುಕಿನಲ್ಲಿ ಕಟ್ಟಿಕೊಂಡಿದ್ದ ಮೌಲ್ಯಗಳೇ ಆಳುವುದು ಸಾಧ್ಯವಿಲ್ಲ. ಏಕೆಂದರೆ ಆಧುನಿಕ ಜೀವನದಲ್ಲಿ ಸಾಮಜಿಕ ನ್ಯಾಯ, ರಾಜಕೀಯ ಸ್ವಾತಂತ್ರ್ಯಗಳು ಬಿಡಿ ವ್ಯಕ್ತಿಗಳ ಹಕ್ಕುಗಳೂ ಬದ್ಧತೆಗಳೂ ಆಗಿರುತ್ತವೆ. ಆದ್ದರಿಂದಲೆ ಏಕಪಕ್ಷೀಯ ಲಿಂಗಾಧಾರಿತ ವ್ಯವಸ್ಥೆಯ ಕಟ್ಟಡವು ನಿಧಾನವಾಗಿಯಾದರೂ ಬಿರುಕು ಬಿಡುತ್ತಿರುವುದನ್ನು ಕಾಣಬಹುದು.

ಜಾತಿ, ಲಿಂಗ, ವರ್ಗಗಳ ಶ್ರೇಣೀಕರಣದ ಚೌಕಟ್ಟು ಕುಸಿದಂತೆಲ್ಲ ಹಳೆಯದು ನಶಿಸಿಹೋಗುವ ಭೀತಿ, ಹಳಹಳಿಕೆಗಳೂ, ಹೊಸವ್ಯವಸ್ಥೆ ತರಬಹುದಾದ ಅಪರಿಚಿತ ಸ್ಥಿತಿಗತಿಗಳ ಭೀತಿ, ಅಸ್ಥಿರತೆಗಳನ್ನು ಎದುರಿಸಲಾರದ ಆತಂಕ - ಇವು ಸಂಕ್ರಮಣ ಕಾಲದಲ್ಲಿ ಅನಿವಾರ್ಯ ಲಕ್ಷಣಗಳು. ಇಂಥ ಸ್ಥಿತಿಯಲ್ಲಿ ಸಾಂಪ್ರದಾಯಿಕತೆಗೇ ಹಿಂಸೆ ಸರಿದು ಹಳೆಯದಕ್ಕೆ ಜೀವಕೊಡುವ ಯತ್ನಗಳನ್ನೆ ಜಾತಿಸಂಘಟನೆಗಳು ಹಮ್ಮಿಕೊಂಡಿರುತ್ತವೆ. (ಉದಾ : ಸತಿಪದ್ಧತಿ, ಬಾಲ್ಯ ವಿವಾಹಗಳ ಮರುಕಳಿಕೆ.) ಅಥವಾ ಸ್ವತಂತ್ರ ಆಯ್ಕೆ ತಂದುಕೊಡುವ ಸ್ವಚ್ಛಂತತೆಗೆ ಮಾರುಹೋಗಿ ಹಳೆಯದೆಲ್ಲವನ್ನೂ ತಳ್ಳಿಟ್ಟು ಆಕರ್ಷಕವೆಂದು ಅನ್ನಿಸುವ ಜೀವನ ಮಾರ್ಗಗಳ ಕಡೆಗೆ ಧಾವಿಸುವ ಬೇರು ಇಲ್ಲದಂಥ ಬದುಕಿನ ಮಾದರಿಗಳೂ ಈಗ ಹೆಚ್ಚಾಗುತ್ತಿವೆ. (ನಗರಗಳಲ್ಲಿ ಶ್ರೀಮಂತ / ಕುಲೀನ ಗೃಹಿಣಿಯರೂ, ಶಾಲಾ ಕಾಲೇಜು ವಿದ್ಯಾರ್ಥಿನಿಯರೂ ಹಣಗಳಿಕೆಗಾಗಿ ಕರೆಹೆಣ್ಣುಗಳಾಗುತ್ತಿರುವುದು ಇಂಥ ಬದುಕಿನ ಆಯ್ಕೆಯ ನಿದರ್ಶನ.)

ಹಳೆಯದು - ಹೊಸತರ ನಡುವೆ ಆಯ್ಕೆ ಯಾವ ಅಂಶಗಳ ಬಗ್ಗೆ ಇರಬೇಕು ಎಂಬುದರ ಪ್ರಜ್ಞಾಪೂರ್ವಕ ಎಚ್ಚರ ಇಂದು ಅಗತ್ಯವಾಗಿ ಮೂಡಿಬರಬೇಕಾಗಿದೆ. ತಾಯ್ತನ ಹೆಣ್ಣಿನ ಜೈವಿಕ, ಮಾನಸಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ನಿಸರ್ಗದತ್ತ ಸಾಧನ. ಆದರೆ ಅದರ ಸುತ್ತಲೂ ಬಿಗಿದಿರುವ ಧಾರ್ಮಿಕ, ಆರ್ಥಿಕ, ಸಾಮಾಜಿಕ ದಿಗ್ಬಂಧನಗಳು ಹೆಣ್ಣನ್ನು ತನ್ನ ತಾಯ್ತನದ ಸ್ವಾತಂತ್ರ್ಯವನ್ನು ಅನುಭವಿಸಲು ಕೊಡದಷ್ಟು ಪ್ರಬಲವಾಗಿ ಅದನ್ನು ತಮ್ಮ ಹಿಡಿತದಲ್ಲಿ ಇರಿಸಿಕೊಳ್ಳುತ್ತವೆ. ಸಾಮಾಜಿಕ ಶ್ರೇಣಿಗಳ ಯಾವುದೇ ಮುಲಾಜಿಗೂ ಬದ್ಧವಾಗಿರದಂಥ ಮುಕ್ತಸ್ಥಿತಿಯಲ್ಲಿ ಬದುಕಬಲ್ಲ ಮಹಿಳೆಯರು, ನಗರ, ಮಹಾನಗರಗಳ ನಿರ್ಲಿಪ್ತ ಪರಿಸರದ ಸವಲತ್ತಿನ ನೆಲೆಯಲ್ಲಿ ಇರುವವರು, ಆರ್ಥಿಕವಾದ ಬಲದಿಂದಲೂ, ಸಾಮಾಜಿಕ ಪ್ರತಿಷ್ಠೆಯ ಚೌಕಟ್ಟಿನ ತುಟ್ಟತುದಿಗೆ ಏರಿದವರೂ ತಾಯ್ತನವನ್ನು ತಮ್ಮ ಇಚ್ಛೆಯಿಂದ ಆರಿಸಿಕೊಳ್ಳಲು, ಮದುವೆಯ ಸಂಸ್ಥೆಯ ಹೊರಗೆ ಉಳಿದೂ ಮಗುವಿನ ತಾಯಾಗುವ ಅನುಭವದ ವೈಶಿಷ್ಟ್ಯವನ್ನು ಸ್ವತಂತ್ರವಾಗಿ ಪಡೆದು ದಕ್ಕಿಸಿಕೊಳ್ಳುವವರೂ ಇಂದು ಕಾಣಸುತ್ತಾರೆ. ಬಹಳಷ್ಟು ಸಲ ಇಂಥವರು ಮಕ್ಕಳು ತಾಯಿಯ ಆಸ್ತಿಯೆಂಬ ರೀತಿಯಿಂದ ಪಿತೃತ್ವದ ಏಣಿಯನ್ನು ನಿರಾಕರಿಸಿ ತಾವೇ ಏರಿಸಾಗುವ ದಿಟ್ಟತನವನ್ನು ತೋರಿಸುತ್ತಾರೆ. ಮಾತೃತ್ವ ವೆಂಬುದನ್ನು ಮಗುವನ್ನು ಹೆರುವುದರ ಮೂಲಕವೇ ಅನುಭವಿಸಬೇಕಿಲ್ಲವೆಂದು ದತ್ತು ಮಕ್ಕಳನ್ನು ಸಾಕುವ ಏಕಾಕಿ ಮಹಿಳೆಯರೂ ಇಂದು ಕಾಣ ಸಿಗುತ್ತಾರೆ.

ಆದರೆ ಒಟ್ಟು ವ್ಯವಸ್ಥೆಯು ಇಂದಿಗೂ ಮದುವೆ - ಸಂತಾನ - ಕುಟುಂಬ ಜೀವನ ದಾಂಪತ್ಯ - ಮಾತಾಪಿತೃತ್ವಗಳ ಸಾಂಪ್ರದಾಯಿಕ ಮಾರ್ಗದೊಳಗೇ ಸಾಗುತ್ತಿರುವುದರಿಂದ ತಾಯಿಯ ಮಕ್ಕಳಷ್ಟೇ ಎಂದು ಕರೆಸಿಕೊಳ್ಳುವುದರಿಂದ ಎದುರಾಗುವ ಮಾನಸಿಕ ಕ್ಷೋಭೆಗಳಿಂದ ತಮ್ಮ ಮಕ್ಕಳನ್ನು ಹೇಗೆ ಪಾರುಮಾಡಬಲ್ಲರು ಎಂಬುದಕ್ಕೆ ಉತ್ತರ ಸರಳವಾಗಿಲ್ಲ. ವಿಶೇಷವಾಗಿ ಮಧ್ಯಮವರ್ಗದ ಕಟ್ಟುಪಾಡುಗಳೊಳಗೇ ರೂಪುಗೊಂಡು ಬೆಳೆದು ಬಂದವರಲ್ಲಿ ಸ್ವತಂತ್ರ ಲೈಂಗಿಕ ಬದುಕನ್ನು ಆಯ್ದುಕೊಳ್ಳುವ ಅಥವಾ ಸಂತಾನದ ಮೇಲಿನ ತನ್ನ ಹಕ್ಕನ್ನು ಸಾಧಿಸಿ ನಿಭಾಯಿಸಿಕೊಳ್ಳುವುದು ಸುಲಭವೂ ಆಗದು. ಏಕಾಕಿತನದಲ್ಲಿ ಮಗುವಿನ ರಕ್ಷಣೆ ಜವಾಬ್ದಾರಿಯ ನಿಭಾವಣೆ ; ಭಾವನಾತ್ಮಕ ಸಂಬಂಧದ ಮಾನಸಿಕ ಆಶ್ವಾಸನೆಯಿಲ್ಲದೆಯೂ ಸಮಾಜದಲ್ಲಿ ಪ್ರತಿಗಳಿಗೆಯೂ ಎದುರಾಗುವ ಕೊಂಕು, ಕುಹಕಗಳಿಗೆ ಕಿವುಡಾಗಿ ಉಳಿಯು ಬಲ್ಲ ಧಾರ್ಢ್ಯ ಮಹಿಳೆಯರೊಳಗೆ ಹೆಚ್ಚು ಮೈಗೂಡಿದ್ದಾದರೆ ಪಿತೃಸಂಸ್ಕೃತಿಯ ಕುಟುಂಬ / ಸಾಮಾಜಿಕ ರಚನೆಗಳು ಬದಲಾಗುವ ಕಾಲ ಬರಬಹುದು. ಅದರರ್ಥ ಕುಟುಂಬವೇ ನಾಶವಾಗಿಬಿಡುತ್ತದೆ ಎಂದಾಗಲೀ, ಅಥವಾ ಪಶ್ಚಿಮದ ಸಾಮಾಜಿಕ ಮಾದರಿಗಳೆಲ್ಲ ಇಲ್ಲಿ ಬಂದು ಬಿಡುತ್ತವೆಂದಾಗಲೀ ಅಲ್ಲ. ಪ್ರತಿಯೊಂದು ಸಂಸ್ಕೃತಿಗೂ ತನ್ನದೇ ಆದ ಒಳಶಕ್ತಿಯೊಂದು ಇರುತ್ತದೆಯಾಗಿ ಬರಲಿರುವ ವ್ಯವಸ್ಥೆ ಈಗಿರುವ ರೀತಿಯ ಕುಟುಂಬದ ಮುಂದುವರಿಕೆ ಆಗಿರಲಾರದು ಎಂದಷ್ಟೇ ಹೇಳಲು ಬಂದೀತು. (ಈ ಲೇಖನಕ್ಕೆ ಅನೇಕ ವಿಚಾರಗಳಲ್ಲಿ ಪ್ರೇರಣೆ : Within the Fragments - a non - holistic approach to Indian Culture ಎಂಬ ನಳಿನಿರಾಜನ್ ಅವರ ಗ್ರಂಥ).

********

# ಪ್ರಚಲಿತದಲ್ಲಿ ಸ್ತ್ರೀ ಸಬಲೀಕರಣದ ಅವಶ್ಯಕತೆ

ಮಹಿಳಾ ಸಬಲೀಕರಣ ಪ್ರಚಲಿತದ ಅವಶ್ಯಕತೆಯಲ್ಲ, ಅನಿವಾರ್ಯತೆ. ಸಬಲೀಕರಣವನ್ನು ವಿಶೇಷ ಕಾರ್ಯಾಚರಣೆಯಾಗಿ ಮಾಡಬೇಕಾಗಿರುವುದೊಂದು ವಿಪರ್ಯಾಸವಾದರೂ, ಈಗಲಾದರೂ ಈ ಕಾರ್ಯಕ್ಕೆ ಚಾಲನೆ ದೊರೆಯುತ್ತಿರುವುದೊಂದು ಸಮಾಧಾನದ ಸಂಗತಿ, ಸಬಲೀಕರಣವೆಂದರೆ 'ಅಬಲೆ' ಎಂಬ ಹಣೆಪಟ್ಟಿ ಕಟ್ಟಿಕೊಂಡಿರುವ ಹೆಣ್ಣು ಆ 'ಬಲೆ' ಯಿಂದ ಹೊರಬಂದು ಸಶಕ್ತಳಾಗಿ, ಸ್ವಾವಲಂಬಿಯಾಗಿ ಸಮಾಜದ ಸಬಲಶಕ್ತೆಯಾಗಿ ಹೊರಹೊಮ್ಮುವ ಕಾರ್ಯಾಚರಣೆ. ಹೀಗಾಗಿ ಇದೊಂದು ವಿಶಿಷ್ಟ ಕಾರ್ಯಾಚರಣೆ.

ಪ್ರಾಚೀನದಲ್ಲಿ ಸ್ತ್ರೀಶಕ್ತಿಯ ಸಾಂಕೇತಿಕ ಉದಾಹರಣೆ-ಯಾಗಬಲ್ಲಂತಹ ವ್ಯಕ್ತಿತ್ವವಾಗಿ ಮೈತ್ರೇಯಿ ಗಾರ್ಗಿಯರು ಕಣ್ಣಮುಂದೆ ಬರುತ್ತಾರೆ. ಯಜ್ಞಯಾಗಾದಿಗಳಲ್ಲಿ ಪುರುಷರಿಗೆ ಸರಿಸಮವಾಗಿ ಪಾಲ್ಗೊಂಡು ವಿದ್ವತ್ ಚರ್ಚೆಗಳಲ್ಲಿ ಅಪ್ರತಿಮರಾಗಿ ಭಾಗವಹಿಸುತ್ತಿದ್ದ ಅವರು ಅಂದಿನ ಅಗಾಧ ಸ್ತ್ರೀಶಕ್ತಿಯ ದ್ಯೋತಕವಾಗಿದ್ದರು. ಪುರಾಣಗಳಲ್ಲಿ ಇತಿಹಾಸಗಳಲ್ಲಿ ರಾಜಮಾತೆಯರು ರಾಣಿಯರು ರಾಜ್ಯಾಡಳಿತದ ಅನೇಕ ಕಾರ್ಯಗಳಲ್ಲಿ ರಾಜರಿಗೆ ಮಾರ್ಗದರ್ಶನ ಮಾಡುವ ಸಾಮರ್ಥ್ಯವನ್ನು ಹೊಂದಿದ್ದ ಉದಾಹರಣೆಗಳು ಹೇರಳವಾಗಿವೆ. ಇವೆಲ್ಲ ಸ್ವಸಾಮರ್ಥ್ಯವುಳ್ಳ ಅಗಾಧ ಸ್ತ್ರೀಶಕ್ತಿಯ ಉದಾಹರಣೆ-ಯಾಯಿತು.

ನಂತರದ ದಿನಗಳಲ್ಲಿ ಸ್ತ್ರೀಯರ ದೈಹಿಕ ಸಾಮರ್ಥ್ಯದ ಮಿತಿ ಹಾಗೂ ಪ್ರಕೃತಿದತ್ತವಾದ ಕೆಲವು ತೊಡಕುಗಳು ಉದಾಹರಣೆಗೆ ಋತುಚಕ್ರ, ಪ್ರಸವ ಹಾಗೂ ತಾಯ್ತನದ ಹೊಣೆ ಇವುಗಳನ್ನು ನೆಪ ಮಾಡಿಕೊಂಡು ಸ್ತ್ರೀಯ ಅದಮ್ಯ ಚೇತನವನ್ನು ಅದುಮುವ ಪರಿಪಾಠ ಪ್ರಾರಂಭವಾಯಿತು. 'ಮನು' ಸ್ಮೃತಿಗೆ ಮಿತಿಮೀರಿದ ಪ್ರಚಾರ ದೊರಕಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಸಮಾಜದ ಇನ್ನೊಂದು ಭಾಗವಾದ ಪುರುಷವರ್ಗ ಸ್ತ್ರೀ ಶೋಷಣೆಗೆ ಮುಂದಾದದ್ದೊಂದು ಐತಿಹಾಸಿಕ ದುರಂತ. ಸಮಾಜದ, ಸಂಸಾರದ ಎರಡು ಸಮಬಲದ ಸಾಮರ್ಥ್ಯಗಳು ಯಾವುದೋ ದೌರ್ಬಲ್ಯದ ಕ್ಷಣಗಳಲ್ಲಿ ಒಂದು ಕೀಳು, ಒಂದು ಮೇಲು ಎಂಬ ಭಾವನೆ ಅಂಕುರಿಸಿ ನಂತರದ ದಿನಗಳಲ್ಲಿ ಈ ತಾರತಮ್ಯವೇ ಹೆಮ್ಮರವಾಗಿ ಬೆಳೆಯಿತು.

ಸಾಮಾಜಿಕ ಕಟ್ಟುಪಾಡುಗಳೊಂದಿಗೆ ಪ್ರಾರಂಭವಾದ ಕುಟುಂಬ ಜೀವನದ ಪರಿಕಲ್ಪನೆ ಕೇವಲ ಶ್ರಮವಿಭಜನೆಯ ಸಲುವಾಗಿ ಪುರುಷರು ಗೃಹಕೃತ್ಯದಾಚೆಗಿನ ಕಾರ್ಯನಿರ್ವಹಣೆ ಮಾಡುತ್ತ, ಸ್ತ್ರೀ ಗೃಹಕೃತ್ಯದ ಕಾರ್ಯ ನಿರ್ವಹಣೆ ಮಾಡುವ ಹೊಂದಾಣಿಕೆಯಿಂದ ಕುಟುಂಬ ಜೀವನ ಅಸ್ತಿತ್ವಕ್ಕೆ ಬಂದಿರಬೇಕು. ನಂತರದ ಬೆಳವಣಿಗೆಯಾಗಿ ಜೀವನದಲ್ಲಿ ಅನೇಕ 'ಬೇಡಿಕೆ'ಗಳು ಹುಟ್ಟಿಕೊಂಡು ಅವುಗಳ 'ಪೂರೈಕೆ'ಗಾಗಿ ಪರ್ಯಾಯ ವ್ಯವಸ್ಥೆಯಾಗಿ ಅರ್ಥವ್ಯವಸ್ಥೆ ಮೈತಾಳಿರಬೇಕು. ಮುಂದುವರಿದ ಹೆಜ್ಜೆಯಾಗಿ' "ಸಂಪಾದನೆ" ಗಾಗಿ "ಉದ್ಯೋಗ" ಸೃಷ್ಟಿಯಾಯಿತು. ಸಂಪಾದನೆ ತರುವ ಉದ್ಯೋಗ ಪುರುಷನ ಪಾಲಾದರೆ ಪೂರಕ ಉದ್ಯೋಗವಾದ ಗೃಹಕೃತ್ಯ ಸ್ತ್ರೀಯ ಪಾಲಾಯಿತು. ಬರಬರುತ್ತ ಹಣ, ಸಂಪತ್ತು ಜೀವನದಲ್ಲಿ ಅತ್ಯಂತ ಪ್ರಮುಖ ಸ್ಥಾನವನ್ನು ಪಡೆದುಕೊಂಡು ಅದರ ಮುಂದೆ ಬೇರೆಲ್ಲವೂ ತೃಣಸಮಾನವಾಯಿತು. ಜೊತೆ ಜೊತೆಗೆ ಹಣ ಸಂಪಾದನೆ ಮಾಡುವ ಗೃಹಕೃತ್ಯದಾಚೆಗಿನ ಕೆಲಸ ಬಹಳ ಪ್ರಮುಖವಾಗಿ ಗೃಹಕೃತ್ಯ ತೀರಾ ಸಾಮಾನ್ಯವೆನಿಸತೊಡಗಿತು. ಇಂತಹ ದಿನಗಳಲ್ಲೇ "ಗೃಹಣಿ ಗೃಹಮುಚ್ಯತೆ" ಇತ್ಯಾದಿ ಘೋಷಣೆಗಳು ಹೆಣ್ಣನ್ನು "ಗೃಹಿಣಿ"ಯಾಗಿ ವೈಭವೀಕರಿಸಿ ಮುಂದುವರಿದಂತೆ 'ಗೃಹಬಂಧಿ' ಯಾಗಿಸಿತು.ಗೃಹಬಂಧಿಯಾದ ಹೆಣ್ಣು ಕ್ರಮೇಣ ಅಶಿಕ್ಷಿತಳಾಗಿ, ವಿಚಾರಶೂನ್ಯಳಾಗಿ, ಅವಕಾಶ ಹೀನಳಾಗಿ ಇಂದಿನ ಶೋಚನೀಯ ಸ್ಥಿತಿಯನ್ನು ತಲುಪಿದಂತೆ ಕಾಣುತ್ತದೆ. ಈ ಘಟ್ಟದಲ್ಲಿ ಪುರುಷಪ್ರಧಾನ ಸಮಾಜದ ಉಗಮವಾಗಿರಬೇಕು.

ತೀರ ಇತ್ತೀಚೆಗೆ ಮಹಿಳೆ ಮತ್ತೆ ಸಬಲಳಾಗುವ ನಿಟ್ಟಿನಲ್ಲಿ ಜಾಗೃತಳಾಗುತ್ತಿದ್ದಾಳೆ. ಹೆಣ್ಣು ಸಬಲೆಯಾಗಬೇಕಾದರೆ ಮೊದಲು ಆಕೆ ಸಾಕ್ಷರಳಾಗಬೇಕು. ಸುಶಿಕ್ಷಿತಳಾಗಬೇಕು. ಪ್ರಜ್ಞಾವಂತಳಾಗಬೇಕು, ವೈಚಾರಿಕತೆಯನ್ನು ಬೆಳೆಸಿಕೊಳ್ಳಬೇಕು. ಹೀಗಾದಾಗ ಮಾತ್ರ ಸ್ವಾಸ್ಥ್ಯಪೂರ್ಣ ಸಮಾಜ ಸೃಷ್ಟಿಯಾಗಬಲ್ಲದು. ಸ್ತ್ರೀ ಪುರುಷರಿಬ್ಬರೂ ಸ್ವಾಸ್ಥ್ಯ ಸಮಾಜದ ಅಡಿಗಲ್ಲುಗಳು. ಆದುದರಿಂದ ಸ್ತ್ರೀ ಸಮೂಹ ಪುರುಷರೊಡನೆ ಸಮಾನಸ್ಪಂದರಾಗಿ ಎಲ್ಲಾ ಕ್ಷೇತ್ರಗಳಲ್ಲೂ ತಮ್ಮ ಸಾಮರ್ಥ್ಯದ ಸದ್ಬಳಕೆಯಾಗುವಂತೆ ಜಾಗೃತರಾಗಬೇಕು.

ಮಹಿಳಾ ಜಾಗೃತಿಯ ಬೇರು ಕೆಳವರ್ಗದ ಸ್ತ್ರೀಶಕ್ತಿಯಲ್ಲಿದೆ. ಆದುದರಿಂದ ಆ ಬೇರುಗಳನ್ನು ಗಟ್ಟಿ ಮಾಡುತ್ತ ಸರಿಯಾದ

ಪೋಷಣೆ ಮಾಡಿದಾಗ ಮಾತ್ರ ಉತ್ತಮಫಲದ ನಿರೀಕ್ಷೆ ಸಾಧ್ಯವೆನಿಸೀತು. ಆಧುನಿಕ ಭಾರತದಲ್ಲಿ ಸ್ವತಂತ್ರ ದೊರಕಿ 57 ವರುಷಗಳಾದರೂ ಮಹಿಳಾ ಜಾಗೃತಿಯ ಬಗ್ಗೆ ಚಿಂತನೆ ತೀರಾ ಇತ್ತೀಚಿನ ಬೆಳವಣಿಗೆಯಾಗಿರುವುದು ಅತ್ಯಂತ ಶೋಚನೀಯ. ಭಾರತದ ಒಟ್ಟಾರೆ ಜನಸಂಖ್ಯೆಯ ಅರ್ಧದಷ್ಟು ಇರುವ ಸ್ತ್ರೀಯರು ಅನೇಕ ರೀತಿಯಲ್ಲಿ ಶೋಷಣೆಗೆ ಒಳಗಾಗಿ ಸಮಾಜದ ಒಂದು ದುರ್ಬಲ ಅಂಗವಾಗಿ ಗುರತಿಸಲ್ಪಡುತ್ತಿರುವುದು ಪುರುಷ ಪ್ರಧಾನ ಸಮಾಜದ ಧೋರಣೆಯ ಪ್ರತಿಪಾದನೆಯಾಗಿದೆ.

ಭ್ರೂಣಾವಸ್ಥೆಯಿಂದಲೆ ಶೋಷಣೆ ದಬ್ಬಾಳಿಕೆಗೆ ಈಡಾಗುವ ಹೆಣ್ಣು ಸಬಲಳಾಗುವ ಕನಸನ್ನಾದರೂ ಹೇಗೆ ಕಂಡಾಳು ? ಭ್ರೂಣಾವಸ್ಥೆಯಲ್ಲೆ ಹುಟ್ಟುವ ಮಗುವಿನ ಲಿಂಗ ಪತ್ತೆ ಮಾಡಿ ಹೆಣ್ಣು ಭ್ರೂಣವಾದರೆ ಆಗಲೆ ಗರ್ಭಪಾತಕ್ಕೆ ಸನ್ನದ್ಧವಾಗುವ ಬರ್ಬರ ಸಮಾಜದಲ್ಲಿ ಸಬಲೀಕರಣದ ಮಾತೆ ಹಾಸ್ಯಾಸ್ಪದವೆನಿಸುತ್ತದೆ. ಕಾನೂನಿನ ಚೌಕಟ್ಟಿನಲ್ಲಿ ಈ ಕೃತ್ಯ ಶಿಕ್ಷಾರ್ಹವಾದರೂ ಇಂತಹ ಪಾತಕಕ್ಕೆ ಕೈ ಹಾಕುವ ಮಂದಿಗಾಗಲಿ, ನೆರವಾಗುವ ಆಸ್ಪತ್ರೆಗಳು ಹಾಗೂ ಸಿಬ್ಬಂದಿಗಳಿಗೆ ಶಿಕ್ಷೆಯಾಗಿರುವ ಉದಾಹರಣೆಗಳು ತೀರಾ ವಿರಳ. ಮಧ್ಯಮವರ್ಗದ ಹಾಗೂ ಶ್ರೀಮಂತ ಕುಟುಂಬಗಳಲ್ಲಿ ಮಾತ್ರ ಸುಶಿಕ್ಷಿತರಾದ ಕೆಲವು ಜನಗಳು ಮಾತ್ರ ಹೆಣ್ಣು ಮಕ್ಕಳ ವಿಷಯದಲ್ಲಿ ಸ್ವಲ್ಪ ಮೃದುಧೋರಣೆ ಹೊಂದಿರುತ್ತಾರೆ. 'ಮಿತಸಂತಾನ' ದ ಅವಶ್ಯಕತೆ ಇಂದಿನ ಸಮಾಜಕ್ಕೆ ಅತ್ಯಗತ್ಯವಾಗಿದ್ದು 'ಮನೆಗೊಂದು ಮಗು' ಎಂಬ ಪ್ರತಿಪಾದನೆಯಲ್ಲಿ ವಂಶೋದ್ಧಾರಕ್ಕೆ ಒಂದು ಗಂಡು ಸಂತಾನ ಮಾತ್ರ ಸಾಕೆಂದು ಭಾವಿಸುತ್ತ ಅದನ್ನೆ ಅನುಸರಿಸಿದರೆ ಮುಂದಿನ ಪೀಳಿಗೆಯಲ್ಲಿ ಸ್ತ್ರೀ ಜಾತಿಯ ಸರಾಸರಿ ಸಂಖ್ಯೆ ಎಷ್ಟಾಗಬಹುದೆಂದು ಯೋಚಿಸಿದರೆ ಬೆಚ್ಚಿಬೀಳುವಂತಾಗುತ್ತದೆ. ಈ ಘಟ್ಟದಲ್ಲಿ ವಿದ್ಯಾವಂತ ಸ್ತ್ರೀಯರು ಮಾತ್ರ ಹುಟ್ಟುವ ಮಗು ಹೆಣ್ಣಾಗಲಿ ಗಂಡಾಗಲಿ ಅದನ್ನು ಜೋಪಾನವಾಗಿ ಬೆಳಸುವ ಯೋಚನೆ ಮಾಡಬಲ್ಲರು. ಆದುದರಿಂದ ಸ್ತ್ರೀ ಸಬಲೀಕರಣದ ಮೊದಲನೆ ಮೆಟ್ಟಿಲಾಗಿ ಸ್ತ್ರೀಗೆ ಕಡ್ಡಾಯ ಶಿಕ್ಷಣದ ವ್ಯವಸ್ಥೆಯಾಗಬೇಕು. ಈ ಕೆಲಸ ಕೇವಲ ನಗರ ಪಟ್ಟಣಗಳಲ್ಲಿ ಮಾತ್ರವಲ್ಲದೆ ಗ್ರಾಮಾಂತರ ಪ್ರದೇಶಗಳಲ್ಲೂ ಆಗಬೇಕು. ಒಂದು ಹೆಣ್ಣು ವಿದ್ಯಾವಂತೆಯಾದರೆ. ಒಂದು ಕುಟುಂಬವೇ ವಿದ್ಯೆ ಪಡೆದಂತೆ. ಏಕೆಂದರೆ ವಿದ್ಯಾವಂತ ಹೆಣ್ಣು ಮಗಳು ಇಡೀ ಕುಟುಂಬವನ್ನೆ ಸರಿಯಾದ ದಾರಿಯಲ್ಲಿ ನಡೆಸಬಲ್ಲಳು.

ಆರ್ಥಿಕ ಸ್ವಾವಲಂಬನೆ ಕೂಡ ಹೆಣ್ಣನ್ನು ಸಬಲೆಯನ್ನಾಗಿ ಮಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ನಮ್ಮ ಸಮಾಜದಲ್ಲಿ ಗಂಡು - ಹೆಣ್ಣಿನ ವೇತನ ಪ್ರಮಾಣದಲ್ಲಿ ತಾರತಮ್ಯವಿರುವ ಅನಿಷ್ಟ ಪದ್ಧತಿ ರೂಢಿಯಲ್ಲಿದೆ, ಕೂಲಿ ಕಾರ್ಮಿಕರ ಹಾಗೂ ಕೃಷಿಕಾರ್ಮಿಕರ ಕೂಲಿಯಲ್ಲಿ ಅಂತರವಿದೆ. ಈ ಪದ್ಧತಿಯನ್ನು ತೊಡೆದುಹಾಕಿ ಸಮಾನ ಕೆಲಸಕ್ಕೆ ಸಮಾನವೇತನ ಸಿಗುವಂತಾಗಬೇಕು. ಕೆಳವರ್ಗ ಹಾಗೂ ಕೆಳಮಧ್ಯಮವರ್ಗದಲ್ಲಿ ಗಂಡು ಕುಡಿತ ಮುಂತಾದ ದುರ್ವ್ಯಸನಗಳಿಗೆ ಬಲಿಯಾಗಿ ಸಂಸಾರದ ಆರ್ಥಿಕ ಹೊರೆ ಹೆಚ್ಚಾಗಿ ಹೆಣ್ಣಿನ ಮೇಲೆಯ ಬಿದ್ದಿರುತ್ತದೆ. ಇಷ್ಟೇ ಅಲ್ಲದೆ ಕುಡಿತ ಮುಂತಾದ ದುಶ್ಚಟಗಳಿಗೆ ಬಲಿಯಾದ ಗಂಡು ಹೆಣ್ಣನ್ನು ಹೊಡೆದು - ಬಡಿದು ದೈಹಿಕವಾಗಿ ಅನೇಕ ರೀತಿಯ ಹಿಂಸೆ ಕೊಟ್ಟು ಆಕೆಯ ಗಳಿಕೆಯನ್ನು ಕೂಡ ತನ್ನ ದುಶ್ಚಟಗಳಿಗೆ ಉಪಯೋಗಿಸಿಕೊಳ್ಳುವ ಉದ್ದೇಶದಿಂದ ದರ್ಪದಿಂದ ಹೆಣ್ಣನ್ನು ನಾನಾರೀತಿಯ ಶೋಷಣೆಗೆ ಒಳಪಡಿಸುತ್ತಾನೆ. ಗಂಡನ ಇಂತಹ ವರ್ತನೆಯಿಂದ ಜರ್ಝರಿತಳಾದ ಹೆಣ್ಣು "ಸಬಲೀಕರಣ"ದ ಬಗ್ಗೆ ಯೋಚಿಸುವ ಮಾತಿರಲಿ ಜೀವನದ ಬಗ್ಗೆಯ ಜಿಗುಪ್ಸೆಯ ನಿಲುವನ್ನು ಹೊಂದುವಂತಹ ಪರಿಸ್ಥಿತಿ ನಿರ್ಮಾಣವಾಗಿರುತ್ತದೆ. ಆದುದರಿಂದ ಎಂತಹುದೇ ಸಮಯದಲ್ಲೂ ಧೃತಿಗೆಡದಂತೆ ಜೀವಿಸುವ ಮನೋದಾರ್ಢ್ಯ ಬೆಳೆಯಲು ವಿದ್ಯೆಯ ಜೊತೆಗೆ ಆರ್ಥಿಕ ಸ್ವಾವಲಂಬನೆಯೂ ಅತ್ಯಗತ್ಯವಾಗುತ್ತದೆ. ಹೀಗಾಗಿ ಸಮಾನ ಕೆಲಸಕ್ಕೆ ಸಮಾನ ವೇತನ, ಹೆಣ್ಣು ಮಕ್ಕಳಿಗೆ ಆಸ್ತಿಯ ಹಕ್ಕು ಉದ್ಯೋಗಾವಕಾಶಗಳಲ್ಲಿ ಮಹಿಳೆಯರಿಗೆ ಆದ್ಯತೆ ಹಾಗೂ ಮೀಸಲಾತಿ, ಸ್ವಯಂ ಉದ್ಯೋಗಿ ಮಹಿಳೆಯರಿಗೆ ಸುಲಭ ಆರ್ಥಿಕ ನೆರವು, ಸಾಲ ಸೌಲಭ್ಯ, ವಿಚಾರಪೂರ್ಣ ಶಿಕ್ಷಣ, ಮಾರ್ಗದರ್ಶನ ಮುಂತಾದ ಕಾರ್ಯಗಳು ಸ್ತ್ರೀ ಸಬಲೀಕರಣದ ಅಂಗವೆನಿಸುತ್ತದೆ.

ಸ್ತ್ರೀ ಶಕ್ತಿ ಎಂದಾಕ್ಷಣ ಮಾತೆ ಶಾರದಾದೇವಿಯಿಂದ ಹಿಡಿದು ಮದರ್ ತೆರೆಸಾವರೆಗಿನ ಅನೇಕ ಅದಮ್ಯ ಚೇತನಗಳು ನೆನಪಿನಲ್ಲಿ ಸುಳಿಯುತ್ತವೆ. ಜೀವನದ ಎಲ್ಲಾ ರಂಗಗಳಲ್ಲೂ ಸ್ವಸಾಮರ್ಥ್ಯದಿಂದ ಮೇಲೇರಿ ಅನೇಕರಿಗೆ ದಾರಿದೀಪವಾಗಿರುವ ಅನೇಕ ಸ್ತ್ರೀಯರ ಉದಾಹರಣೆಗಳು ಸ್ತ್ರೀ ಶಕ್ತಿಯನ್ನು ಎತ್ತರಕ್ಕೆ ಏರಿಸುವ ಮೆಟ್ಟಿಲುಗಳಾಗಿವೆ. ಪ್ರತಿ ಪುರುಷನ ಸಾಧನೆಯ ಹಿಂದೆ ಒಬ್ಬ ಸ್ತ್ರೀಯ ಕೈವಾಡವಿದ್ದೇ ಇರುತ್ತದೆ ಎಂಬ ಹೇಳಿಕೆಯಂತೆ ಜೀಜಾಬಾಯಿಯ ಮಾರ್ಗದರ್ಶನ ಶಿವಾಜಿಯನ್ನು ಇತಿಹಾಸದ ಪುಟಗಳಲ್ಲಿ ಅಜರಾಮರವಾಗಿಸಿದೆ. ಅಂತಹುದೇ ಪ್ರೇರಣೆ ತತ್ಕಾಲಕ್ಕೆ ಮಹಿಳಾ ಜಾಗೃತಿಗಾಗಿ ಅತ್ಯಾವಶ್ಯಕವೆನಿಸಿದೆ.

ಇಂದಿಗೂ ಅವಿವಾಹಿತ ಹೆಣ್ಣು, ವಿಧವೆ ಹಾಗೂ ವಿಚ್ಛೇದಿತ ಹೆಣ್ಣುಮಕ್ಕಳು ತಮ್ಮದಲ್ಲದ ತಪ್ಪಿಗೆ ಸಾಮಾಜಿಕ ನೆಲೆಗಟ್ಟಿನಲ್ಲಿ

ಅನೇಕ ರೀತಿಯ ಮಾನಸಿಕ ಹಿಂಸೆಗೆ ಗುರಿಯಾಗುತ್ತಾರೆ. ಇಂತಹ ಮಹಿಳೆಯರ ವಿಷಯದಲ್ಲಿ ಹೆಚ್ಚಿನಪಾಲು ಮಹಿಳೆಯರೇ ಮಹಿಳೆಯರ ಮೇಲೆ ಮಾನಸಿಕ ಒತ್ತಡ ಹೇರುತ್ತಾರೆ. ಇಂತಹ ಪರಿಸ್ಥಿತಿಯನ್ನು ನಿಭಾಯಿಸಲು ಆ ಹೆಣ್ಣು ಸಬಲಳಾಗಿ ಸಮಾಜವನ್ನು ಎದುರಿಸುವುದೇ ದಾರಿ. ಮಹಿಳೆಯೇ ಮಹಿಳೆಯನ್ನು ನಾನಾ ರೀತಿಯಲ್ಲಿ ಶೋಷಿಸುವುದು ಸರ್ವಥಾ ಖಂಡನೀಯ. ತಮ್ಮ ಇಳಿ ವಯಸ್ಸಿನಲ್ಲಿ ಕುಟುಂಬದ ಅವಕೃಪೆಗೆ ಪಾತ್ರರಾಗುವ ವೃದ್ಧ ಸ್ತ್ರೀಯರು ಕೂಡ ವಿಚಾರವಂತರಾಗಿ, ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕು.

ಜಾಗತೀಕರಣದ ಈ ಸಮಯದಲ್ಲಾದರೂ ಸಮಾಜದ ಅವಿಭಾಜ್ಯ ಅಂಗವಾದ ಸ್ತ್ರೀ ಸಮೂಹ ತಮ್ಮ ಮೇಲೆ ಜರುಗುತ್ತಿರುವ ಶೋಷಣೆಯ ವಿರುದ್ಧ ದನಿ ಎತ್ತಿ ತಮ್ಮ ಹಕ್ಕಿಗಾಗಿ ಹೋರಾಟ ನಡೆಸಬೇಕು ಸಂವಿಧಾನಾತ್ಮಕವಾಗಿ ದಕ್ಕಬೇಕಾದ 33% ಮೀಸಲಾತಿಯ ಹಕ್ಕನ್ನು ಪಡೆದುಕೊಂಡು ಸ್ತ್ರೀಶಕ್ತಿ ಸ್ವಾಸ್ಥ್ಯ ಸಮಾಜದ ಸಮಬಲವಾಗಿ ಹೊರಹೊಮ್ಮಬೇಕು ಈ ನಿಟ್ಟಿನಲ್ಲಿ ಕಾನೂನು, ಸಂವಿಧಾನದತ್ತ ವಿಧೇಯಕಗಳು ಕೇವಲ ಪುಸ್ತಕದ ಹಾಳೆಗಳಲ್ಲಿ ಉಳಿಯದೆ ನೂರಕ್ಕೆ ನೂರರಷ್ಟು ಕಾರ್ಯಗತವಾಗಬೇಕು. ಆದರೆ ಈ ಕಾರ್ಯಕ್ಕೆ ಕುಟಿಲ ರಾಜಕೀಯದ ಲೇಪ ಖಂಡಿತಾ ಕೂಡದು, 'ಸ್ತ್ರೀ ಸಬಲೀಕರಣವೆಂಬುದು ಕೇವಲ ಒಂದೆರಡು ರಾಜಕೀಯ ಪ್ರೇರಿತ ಸಮಾರಂಭಗಳಾಗಿ ಹಾಗೆಯೇ ತಣ್ಣಗಾಗಬಾರದು. ವಿದ್ಯಾವಂತರು, ಚಿಂತನಶೀಲರು, ಸ್ವಾಸ್ಥ್ಯ ಸಮಾಜದ ಬಗೆಗೆ ನಿಜವಾದ ಕಳಕಳಿಯಿರುವ ಜನರು ಸಬಲೀಕರಣದ ಕಾರ್ಯಾಚರಣೆಯ ರೂಪು ರೇಷೆಗಳನ್ನು ರೂಪಿಸಬೇಕು "ಮನೆಯೆ ಮೊದಲ ಪಾಠಶಾಲೆ ; ಜನನಿ ತಾನೆ ಮೊದಲ ಗುರುವು" ಎಂಬಂತೆ ಸಬಲೀಕರಣದ ತತ್ವ ಸಮಾಜದ ಅತಿ ಸಣ್ಣ ಘಟಕವಾದ ಕುಟುಂಬದಿಂದಲೆ ಪ್ರಾರಂಭವಾಗಬೇಕು. ಸಂಸಾರದಲ್ಲಿ ಹೆಣ್ಣು ತನ್ನ ಸತ್ವದಿಂದಲೇ ತನ್ನ ಮಹತ್ವವನ್ನು ಸಾಬೀತುಪಡಿಸಬೇಕು. ಸನ್ನಡತೆಯ, ಸುಶಿಕ್ಷಿತ, ಚಿಂತನಶೀಲ ಹೆಣ್ಣು "ಸಬಲೀಕರಣ" ದ ಸಮರ್ಥ ಆಯುಧವಾಗುವುದು ಇಂದಿನ ಅಗತ್ಯ. ಲೈಂಗಿಕ ಶೋಷಣೆ ವರದಕ್ಷಿಣೆ ವಿರೋಧ ಹಾಗೂ ಮೂಢನಂಬಿಕೆಗಳ ವಿರುದ್ಧ ದನಿ ಎತ್ತುವಷ್ಟು ಸಬಲಳಾಗುವುದು ಅತ್ಯಗತ್ಯ.

**ಲೇಖಕಿ : ಸಿ.ಎಸ್.ಗಾಯತ್ರಿ**

**ಕೆನರಾ ಬ್ಯಾಂಕ್**

ನಂ 29, ಕೃಷ್ಣರಾವ್ ಪಾರ್ಕ್ ರಸ್ತೆ,ಲಾಲ್‌ಬಾಗ್ ಪಶ್ಚಿಮ,
ಬಸವನಗುಡಿ, ಬೆಂಗಳೂರು - 560 004

# ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತಿನ ಕೇಸರೀಕರಣ

ಆದಿತ್ಯನಾರಾಯಣರವರು ಬರೆದ 'ಚರಿತ್ರೆಯ ವಿಕೃತೀಕರಣ' ಅತ್ಯಂತ ಮಹತ್ವವಾದ ಪುಸ್ತಕ. ಭಾರತದ ಬಹು ಮುಖೀ ಸಂಸ್ಕೃತಿಯ ಐಕ್ಯತೆಗೆ ಧಕ್ಕೆತರುವ ಪ್ರಯತ್ನವನ್ನು 90ರ ದಶಕದಲ್ಲಿ ಎನ್.ಡಿ.ಎ.ಸರ್ಕಾರ ಹೇಗೆ ಮಾಡಿತು ಎಂಬುದನ್ನು ಈ ಪುಸ್ತಕ ವಿವರಿಸುತ್ತದೆ. ತಾಲಿಬಾನೀಕರಣ, ಕೇಸರೀಕರಣ ಹೇಗೆ NCERT ನಲ್ಲಿ ನಡೆದವು ಎಂಬುದರ ಸವಿವರವಾದ ವಿವರಣೆ ಓದುಗರ ಕಣ್ಣು ತೆರೆಯುವಂತಿದೆ. ಹಾಗಾಗಿ 'ಮಾನಸ'ದಲ್ಲಿ ಈ ಪುಸ್ತಕದ ಆಯ್ದ ಭಾಗಗಳನ್ನು ಆಧರಿಸಿ ಈ ಲೇಖನ ಬರೆದಿದ್ದೇವೆ. ಓದುಗರು ಈ ಪುಸ್ತಕ ಓದಲೇಬೇಕು ಎಂಬುದು ಈ ಪರಿಚಯಾತ್ಮಕ ಲೇಖನದ ಉದ್ದೇಶ.

**ಸಂ.ಮಂ**

- ಚಿರತ್ರೆಯ ವಿಕೃತೀಕರಣ,
ಲೇ : ಆದಿತ್ಯ ನಾರಾಯಣ, ನವಕರ್ನಾಟಕ ಪಬ್ಲಿಕೇಶನ್ಸ್, ಎಂಬೆಸಿ ಸೆಂಟರ್,
ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

ಈ ಪರಿಷತ್ತು 1962ರಲ್ಲಿ ಪ್ರಾರಂಭವಾಯಿತು. ದೆಹಲಿಯಲ್ಲಿ ಇದರ ಮುಖ್ಯ ಕಛೇರಿ. ಮೈಸೂರು, ಭುವನೇಶ್ವರ, ಭೂಪಾಲ್ ಹಾಗೂ ಅಜ್ಮೀರದಲ್ಲಿ ನಾಲ್ಕು ಪ್ರಾದೇಶಿಕ ವಿದ್ಯಾಸಂಸ್ಥೆಗಳಿವೆ. ರಾಜ್ಯಗಳ ಶಾಲಾ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಯಾವುದೇ ಸಮಸ್ಯೆಯನ್ನು ಪರಿಷತ್ತಿನ ಗಮನೆಕ್ಕ ತರುವುದು, ರಾಜ್ಯಕ್ಕೆ ಬೇಕಾಗುವ ಆರ್ಥಿಕ ಹಾಗೂ ಅಕೆಡೆಮಿಕ್ ಸಹಾಯ ಒದಗಿಸುವುದು ಈ ಪರಿಷತ್ತಿನ ಕರ್ತವ್ಯ.

ಎನ್.ಸಿ.ಇ.ಆರ್.ಟಿ.ಯು ಹಲವು ಜವಾಬ್ದಾರಿಗಳಲ್ಲಿ ಸಂವಿಧಾನದಲ್ಲಿ ಭರವಸೆ ಕೊಟ್ಟಿರುವ ಧರ್ಮ ನಿರಪೇಕ್ಷ

ಬದುಕನ್ನು ಮಕ್ಕಳಿಗೆ ಕಲಿಸುವುದೂ ಒಂದು. ಶಾಲಾ ವಿದ್ಯಾಭ್ಯಾಸಕ್ಕೆ ಸಂಬಂಧ ಪಟ್ಟಂತೆ ಸಂಶೋಧನೆ ಮಾಡುವುದು, ಶಿಕ್ಷಕರಿಗೆ ತರಬೇತಿ ನೀಡುವುದು, ಅತ್ಯುತ್ತಮ ವಿದ್ವಾಂಸರಿಂದ ಪಠ್ಯ ಪುಸ್ತಕ ಬರೆಸುವುದು, ಪಠ್ಯಪುಸ್ತಕ ಮೌಲ್ಯೀಕರಣ ಮಾಡುವುದು, ಮಾದರಿ ಶಿಕ್ಷಕರನ್ನು ತಯಾರಿಸುವುದು. ಶಾಲಾ ಮಕ್ಕಳಲ್ಲಿ ಪರಿಸರ, ಮಾಲಿನ್ಯತೆ, ಲಿಂಗಭೇದದ ಬಗ್ಗೆ, ದಲಿತ, ಬುಡಕಟ್ಟು ಜನಾಂಗದ ಬಗ್ಗೆ ಭಿನ್ನ ಕಾರ್ಯಕ್ರಮ ರೂಪಿಸುವುದು ಈ ಪರಿಷತ್ತಿನ ಹಲವು ಜವಾಬ್ದಾರಿಗಳು.

ಎನ್.ಸಿ.ಇ.ಆರ್.ಟಿ.ಗೆ ಪ್ರತಿ ರಾಜ್ಯದ ರಾಜಧಾನಿಯಲ್ಲೂ ಒಬ್ಬ ಪ್ರಾಂತೀಯ ಸಂಪರ್ಕಾಧಿಕಾರಿ ಇರುತ್ತಾರೆ. ಇವರು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನಡುವೆ ಸಂಪರ್ಕಾಧಿಕಾರಿಗಳಾಗಿ ಕೆಲಸ ಮಾಡುತ್ತಾರೆ. ಈ ಸಂಪರ್ಕಾಧಿಕಾರಿಗಳು ಆಯಾ ರಾಜ್ಯದ ವಿದ್ಯಾ ಆಯುಕ್ತರು. ಆ ವಲಯದ ಪ್ರಾದೇಶಿಕ ವಿದ್ಯಾಸಂಸ್ಥೆಯ ಪರಿಣಿತರು ಮತ್ತು ರಾಜ್ಯದ ವಿದ್ಯಾ ಪರಿಣಿತರುಗಳ ಜೊತೆ ಸಭೆ ನಡೆಸಿ, ರಾಜ್ಯದ ಅವಶ್ಯಕತೆಯನ್ನು ಪಟ್ಟಿ ಮಾಡಿ ಪ್ರಾದೇಶಿಕ ವಿದ್ಯಾ ಸಂಸ್ಥೆಗೆ ತರುತ್ತಾರೆ. ಈ ಸಂಸ್ಥೆಯ ಪರಿಣಿತರು ಅದನ್ನು ಕಾರ್ಯಕ್ರಮವಾಗಿ' ರೂಪಿಸಿ ಎನ್.ಸಿ.ಇ.ಆರ್.ಟಿ. ಕಾರ್ಯ ಕ್ರಮಗಳ ಶಿಫಾರಸ್ಸು ಸಮಿತಿಯ ಒಪ್ಪಿಗೆಗೆ ಮತ್ತು ಆರ್ಥಿಕ ಮಂಜೂರಾತಿಗೆ ಕಳಿಸುತ್ತಾರೆ.

ಪರಿಷತ್ತಿನ ನಾಲ್ಕು ಪ್ರಾಂತೀಯ ವಿದ್ಯಾಸಂಸ್ಥೆಗಳೂ ಶಿಕ್ಷಕರ ತರಬೇತಿ ಕೇಂದ್ರಗಳಾಗಿದ್ದವು. ಇಲ್ಲಿ ತಯಾರಾದ ಶಿಕ್ಷಕರು ಆದರ್ಶ ಶಿಕ್ಷಕರು ಎನ್ನುವ ಗೌರವ ಪರಿಷತ್ತಿಗೆ ಸಂದಿತು. ಇಲ್ಲಿಯ ಪ್ರಾಧ್ಯಾಪಕ ವರ್ಗ, ವಿದ್ವಾಂಸರು ರಚಿಸಿದ ಪಾಠಕ್ರಮ, ಶಾಲಾ ಪುಸ್ತಕಗಳು, ಮತ್ತು ತರಬೇತಿ ಕಾರ್ಯಕ್ರಮದಿಂದಾಗಿ ಪರಿಷತ್ತಿನ ಕೀರ್ತಿ ಉನ್ನತ ಶೃಂಗಕ್ಕೇರಿತು. 1990ರ ದಶಕದವರೆಗೆ ಪರಿಷತ್ತಿಗೆ ಈ ಕೀರ್ತಿ ಇತ್ತು.

ಎನ್.ಸಿ.ಇ.ಆರ್.ಟಿ.ಯು ಒಂದು ಸ್ವಾಯತ್ತತೆ ಇರುವ ಸಂಸ್ಥೆ. ಈ ಪರಿಷತ್ತಿಗೆ ಸಂವಿಧಾನಾತ್ಮಕ ಸ್ಥಾನ ಇಲ್ಲ. ಇದಕ್ಕೆ ಇರುವುದು ಶಾಲಾ ವಿದ್ಯಾಭ್ಯಾಸಕ್ಕೆ ಸಂಬಂಧಸಿದ ವಿಷಯಗಳ ಬಗ್ಗೆ ಕೇಂದ್ರ ಸರ್ಕಾರಕ್ಕೆ ಶಿಪಾರಸ್ಸು ಮಾಡುವ ಪಾತ್ರ. ಇದಕ್ಕೆ ಕೇಂದ್ರ ಸರ್ಕಾರ ಒಬ್ಬ ನಿರ್ದೇಶಕರನ್ನು ನೇಮಿಸುತ್ತಾರೆ. ಈ ನಿರ್ದೇಶಕ ಆಳುವ ಸರ್ಕಾರದ ಪಕ್ಷಗಳ ನೀತಿಗೆ ಬದ್ಧನಾಗಿರುವುದನ್ನು ಆಶಿಸಲಾಗುತ್ತದೆ. ಆದಾಗ್ಯೂ ನಿರ್ದೇಶಕರಿಗೆ ಸ್ವಾತಂತ್ರ್ಯವಿರುತ್ತದೆ. ಆದರೆ ಆಳುವ ಸರ್ಕಾರದ ನೀತಿಯ ವಿರುದ್ಧ ನಡೆಯುವ ಸ್ವಾತಂತ್ರ್ಯ ಇರುವುದಿಲ್ಲ. ಮಂತ್ರಾಲಯ ತಮ್ಮ ಪಕ್ಷದ ನೀತಿಗಳು ಶಾಲಾ ವಿದ್ಯಾಭ್ಯಾಸದಲ್ಲಿ ಪ್ರಾತಿನಿಧ್ಯ ಪಡೆಯಬೇಕು ಎಂದು ತೀರ್ಮಾನಿಸಿದರೆ ನಿರ್ದೇಶಕರಿಗೆ ಅದನ್ನು ತಡೆಯುವ ಶಕ್ತಿ ಇರುವುದಿಲ್ಲ. ಆದರೆ ಅದನ್ನು ಸಾರ್ವಜನಿಕರ ಗಮನಕ್ಕೆ ತರಬಹುದು. ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿಯ ಮಂತ್ರಿಗಳೇ ಈ ಪರಿಷತ್ತಿನ ಅಧ್ಯಕ್ಷರು. ಇವರೇ ಖುದ್ದಾಗಿ ಗಮನವಿಟ್ಟು ನಿರ್ದೇಶಕರನ್ನು ಆಯ್ಕೆ ಮಾಡುತ್ತಾರೆ.

ನಿರ್ದೇಶಕರಿಗೆ ಸಹಾಯ ಮಾಡಲು ಮತ್ತು ನಿರ್ದೇಶಕರು ತೆಗೆದುಕೊಳ್ಳಬಹುದಾದ ತೀರ್ಮಾನಗಳಲ್ಲಿ ಪ್ರಜಾಪ್ರಭುತ್ವ ಅಥವಾ ಧರ್ಮ ನಿರಪೇಕ್ಷ ವಿರೋಧಿ ನೀತಿ ಇರುವುದಾದರೆ ಅದನ್ನು ತಿದ್ದಲು ಅಥವಾ ತಡೆಯಲು ಒಂದು ಆಡಳಿತ ಮಂಡಳಿ ಇರುತ್ತದೆ. ಈ ಸಮಿತಿಗೆ ಸದಸ್ಯರನ್ನು ನೇಮಿಸುವ ಅಧಿಕಾರವೂ ಸರ್ಕಾರದ್ದೇ. ಮಂತ್ರಾಲಯದ ಕಾರ್ಯದರ್ಶಿಗಳು ಇದರ ಸದಸ್ಯರು. ಮಾನವ ಸಂಪನ್ಮೂಲ ಅಭಿವೃದ್ಧಿಯ ಮಂತ್ರಿಗಳು ಇದರ ಅಧ್ಯಕ್ಷರು. ಯಾವುದೇ ಆಡಳಿತಕ್ಕೆ ಸಂಬಂಧಿಸಿದ ತೀರ್ಮಾನ ತೆಗೆದುಕೊಳ್ಳುವಲ್ಲಿ ಇದು ಪರಿಷತ್ತಿನ ಅತ್ಯುನ್ನತ ಮಂಡಳಿ.

ಆಕೆಡಮಿಕ್ ವಿಷಯಗಳಿಗೆ ಸಂಬಂಧಿಸಿದಂತೆ ಮಾಡುವ ಶಿಫಾರಸ್ಸುಗಳಿಗೆ 'ಕೇಬ್' ಅತ್ಯುನ್ನತ ಮಂಡಳಿ. (Central Advisory Board of Education) ಈ ಕೇಬ್ ಮಂಡಳಿಯ ಸದಸ್ಯರುಗಳು ದೇಶದ ವಿದ್ಯಾಪರಿಣತರು, ಉನ್ನತ ಮಟ್ಟದ ವಿಜ್ಞಾನಿಗಳು, ಬರಹಗಾರರು, ಬುದ್ಧಿ ಜೀವಿಗಳು, ವೈಚಾರಿಕ ಸ್ವಾತಂತ್ರ್ಯ ಉಳಿಸಿಕೊಳ್ಳುವಷ್ಟು ನೈತಿಕ ಶಕ್ತಿ ಇರುವವರು. ಈ ರೀತಿಯ ಜನರನ್ನು ಈ ಮಂಡಳಿಗೆ ಆಯ್ಕೆ ಮಾಡುವುದು ಮಂತ್ರಾಲಯದ ನೈತಿಕ ಜವಾಬ್ದಾರಿ. ಎನ್.ಡಿ.ಎ.ಸರ್ಕಾರ ಅಸ್ತಿತ್ವಕ್ಕೆ ಬರುವ ಮುಂಚೆ ಈ ಪರಂಪರೆ ಪತನವಾಗದಂತೆ ಹೆಚ್ಚು-ಕಡಿಮೆ ಎಲ್ಲಾ ಸರ್ಕಾರಗಳೂ ಕಾಪಾಡಿಕೊಂಡು ಬಂದಿದ್ದವು. ಎಲ್ಲಾ ರಾಜ್ಯಗಳ ವಿದ್ಯಾಮಂತ್ರಿಗಳು ಈ ಎರೆಡೂ ಮಂಡಳಿಯ ಸದಸ್ಯರಾಗಿದ್ದು, 1990 ರ ದಶಕದವರೆಗೆ NCERTಯ ಜವಾಬ್ದಾರಿಗಳನ್ನು ನೈತಿಕವಾಗಿ ಕಾಪಾಡಿಕೊಂಡು ಬರುತ್ತಿದ್ದರು.

ಇಲ್ಲಿ ಉತ್ತಮ ಚರಿತ್ರೆಕಾರರೆಂದು ರಾಷ್ಟ್ರದಾದ್ಯಂತ ಹೆಸರಾಗಿರುವ ವಿದ್ವಾಂಸರಾದ ಆರ್.ಎಸ್.ಶರ್ಮ, ರೋಮಿಲ ಥಾಪರ್, ಬಿಪಿನ್ ಚಂದ್ರ, ಸತೀಶ್‌ಚಂದ್ರ ಇಂತಹವರು ಬರೆದ ಪುಸ್ತಕಗಳನ್ನು ಪರಿಷತ್ತು ಮಕ್ಕಳ ಕೈಯಲ್ಲಿ ಇಟ್ಟಿತ್ತು. ದೇಶದಾದ್ಯಮತ ಈ ಪುಸ್ತಕಗಳಿಗೆ ಬೆಲೆ ಇತ್ತು. ಹೀಗಾಗಿ ಪರಿಷತ್ತಿನ ಪುಸ್ತಕಗಳಿಗೆ ರಾಷ್ಟ್ರದಲ್ಲಿ ಒಂದು ಸ್ಥಾನ ದೊರಕಿತ್ತು. ನಂತರದ ವರ್ಷಗಳಲ್ಲಿ ಪರಿಷತ್ತಿನ ನಿರ್ದೇಶಕರ ಮಿತಿ, ಪಾಂಡಿತ್ಯದ ಕೊರತೆ, ವಿದ್ಯಾರ್ಹತೆ ಇಲ್ಲದ ಪರಿಷತ್ತಿನ

ಅಧ್ಯಾಪಕರುಗಳು ಪರಿಣತಿಯ ಬಗ್ಗೆ ಗೌರವವಿಲ್ಲದಿರುವುದು, ರಾಜಕೀಯ ಒತ್ತಡಗಳಿಂದಾಗಿ ಪರಿಷತ್ತಿನ ದಕ್ಷತೆ ಕ್ಷೀಣಿಸಿದ್ದಾಗ್ಯೂ ಸಹ 1990 ರವರೆಗೆ ಪರಿಷತ್ತು ತನ್ನ ಕೀರ್ತಿಯನ್ನು ಉಳಿಸಿಕೊಂಡೇ ಬಂದಿತ್ತು.

## -ಎನ್.ಡಿ.ಎ.ಸರ್ಕಾರ ಹಾಗೂ ಕೇಸರೀ ಕರಣ-

ಎನ್.ಡಿ.ಎ. ಸಾರ್ಕರ ಅಸ್ತಿತ್ವಕ್ಕೆ ಬಂದೊಡನೆ ಮುರಳಿ ಮನೋಹರ ಜೋಶಿಯವರು ಮಾನವ ಸಂಪನ್ಮೂಲ ಅಭಿವೃದ್ಧಿಯ ಮಂತ್ರಿಗಳಾದರು. ಇವರು ಜಗಮೋಹನ್ ಸಿಂಗ್ ರಾಜ್‌ಪುತ್‌ರವರನ್ನು NCERT ಯ ನಿರ್ದೇಶಕರನ್ನಾಗಿ ನೇಮಿಸಿದರು. ಈ ವ್ಯಕ್ತಿ ತಾವು ಮಾಡಿದ ಹಲವಾರು ಅಪರಾಧಗಳ ಆರೋಪದಿಂದಾಗಿ ಭೋಪಾಲ್‌ನಲ್ಲಿ ಪ್ರಾಂಶುಪಾಲರ ಹುದ್ದೆ ಕಳೆದುಕೊಂಡವರು. ಈ ಬಗ್ಗೆ ರಾಜಕೀಯ ಒತ್ತಡದಿಂದಾಗಿ ವಿಚಾರಣೆ ನಡೆಯಲೇ ಇಲ್ಲ. 1999 ರಲ್ಲಿ ಇವರು ಪರಿಷತ್ತಿನ ಅಧ್ಯಕ್ಷರಾಗಿ ನೇಮಕಗೊಂಡರು. ಅಂದಿನಿಂದ ಪರಿಷತ್ತು ಇಡೀ ಪಾಠಕ್ರಮವನ್ನು ಮತ್ತು ಪಠ್ಯ ಪುಸ್ತಕಗಳನ್ನು "ಸ್ವದೇಶೀ ಕರಣ" ಗೊಳಿಸುವುದರ ಮೂಲಕ ಜ್ಞಾನಾರ್ಜನೆಯನ್ನು ಕಡೆಗಣಿಸಿ - ಹಿಂದುತ್ವ ಆದರ್ಶವನ್ನು ವ್ಯಾಪಕವಾಗಿ ಹಬ್ಬುವ ಕಾರ್ಯಕ್ರಮದಲ್ಲಿ ತೊಡಗಿಸಿಕೊಂಡಿತು.

ಟಿ.ಕೆ. ರಾಜಲಕ್ಷ್ಮಿ - ಪತ್ರಿಕೋದ್ಯಮಿಯೊಬ್ಬರು ಹೇಳುವಂತೆ : ಆರು ಮತ್ತು 9 ನೆಯ ತರಗತಿಗಳಿಗೆ ತಯಾರಿಸಿರುವ ಹೊಸ ಸಮಾಜ ವಿಜ್ಞಾನ ಪುಸ್ತಕಗಳಲ್ಲಿ ವಾಸ್ತವ ಘಟನೆಗಳ ವಿವರ ನೀಡುವಲ್ಲಿ, ವಿಷಯ ವಿಶ್ಲೇಷಣೆ ಮಾಡುವಲ್ಲಿ, ಮತ್ತು ಚಾರಿತ್ರಿಕ ಘಟನೆಗಳನ್ನು ಅರ್ಥಮಾಡಿಕೊಳ್ಳುವಲ್ಲಿ ದೇಶದ ಚಾರಿತ್ರಿಕ ದೃಷ್ಟಿಕೋನವನ್ನು ಹೇಗಾದರೂ ಮಾಡಿ ಬದಲಿಸುವ ತೀವ್ರ ಪ್ರಯತ್ನ ನಡೆದಿದೆ.

ಉದಾಹರಣೆಗೆ ಹರಪ್ಪ ಮತ್ತು ಮೊಹೆಂಜೊದಾರೊ ನಾಗರಿಕತೆ ಮತ್ತು ಸಂಸ್ಕೃತಿಗಳ ಪುರಾತನತೆಯನ್ನು ಮತ್ತು ಅದರ ಸಮಾನತೆಯನ್ನು ವೇದಗಳ ಕಾಲಕ್ಕೆ ಜೋಡಿಸುವ ಹುನ್ನಾರ ನಡೆಸಿದ್ದಾರೆ. 6 ನೆಯ ತರಗತಿಯ ಪುಸ್ತಕದಲ್ಲಿ ಭಾರತದ ನಾಗರೀಕತೆ ಎನ್ನುವ 10ನೆಯ ಅಧ್ಯಾಯದಲ್ಲಿ ಸಮಕಾಲೀನ ಹಿಂದೂ ಧಾರ್ಮಿಕ ರೂಢಿ ಸಂಪ್ರದಾಯಗಳಾದ ಶಿವಲಿಂಗಪೂಜೆ, ಅರಳಿ ಮರದ ಪೂಜೆ, ಆ ಅವಧಿಯಲ್ಲಿಯೂ ಇದ್ದವು ಎನ್ನುವುದನ್ನು ಸ್ಥಾಪಿಸಲು ಪ್ರಯತ್ನಿಸಿದ್ದಾರೆ. ಈ ಎರಡೂ ಸಂಸ್ಕೃತಿಗಳ ವಿನಾಶಕ್ಕೆ ಆರ್ಯರ ಆಗಮನ ಕಾರಣವೆಂದು ಎಲ್ಲೂ ಹೇಳಿಲ್ಲ.

11ನೆಯ ಅಧ್ಯಾಯದಲ್ಲಿ ವೇದಕಾಲ ಭೂಗೋಳ ಎನ್ನುವ ಹೊಸ ವಿಷಯ ಪರಿಚಯ ಮಾಡುತ್ತಾರೆ.

ಇವರು ಹರಪ್ಪ - ವೇದ ಕಾಲದ ಜನರ ಆರ್ಥಿಕ ಪರಿಸ್ಥಿತಿ, ಸಾಮಾಜಿಕ ಬದುಕಿನ ರೀತಿ-ನೀತಿಗಳು ಮತ್ತು ಅವರು ಏನು ಆಹಾರ ತಿನ್ನುತ್ತಿದ್ದರು ಎನ್ನುವುದರ ಬಗ್ಗೆ ಏನನ್ನೂ ಹೇಳುವುದಿಲ್ಲ. ದನಗಳನ್ನು ಸಾಕುವುದು ಅವರ ಕಸುಬಾಗಿದ್ದರೂ ಹಸುವನ್ನು ಪವಿತ್ರ ಪ್ರಾಣಿ ಎಂದು ಅವರು ಪರಿಗಣಿಸಿರಲಿಲ್ಲ ಎನ್ನುವುದನ್ನು ಝಾ ರವರು ತಮ್ಮ 'The Myth of the holy Cow' ಎನ್ನುವ ಪುಸ್ತಕದಲ್ಲಿ ಆಧಾರ ಸಹಿತ ದೀರ್ಘವಾಗಿ ಚರ್ಚಿಸಿದ್ದಾರೆ. ಹಸುವಿನ ಮಾಂಸ ಅತಿಥಿಗಳಿಗೆ ವಿಶೇಷವಾಗಿ ಅಡುಗೆ ಮಾಡಿ ಬಡಿಸುತ್ತಿದ್ದ ಪದಾರ್ಥವಾಗಿತ್ತು. ಹಸು ಆಗಿನ ಕಾಲದ ಬಹು ಮುಖ್ಯವಾದ ಆರ್ಥಿಕ ವಸ್ತುವಾಗಿತ್ತು ಎನ್ನುವುದು ಎಲ್ಲಾ ಗುಂಪಿನ ಚರಿತ್ರೆಕಾರರು ಒಪ್ಪಿರುವ ವಿಷಯ. ಆದರೆ ಪರಿಷತ್ತಿನ ಚರಿತ್ರೆಕಾರರು ಹಸುವನ್ನು ವೇದದ ಕಾಲದಲ್ಲೇ ಪವಿತ್ರ ಪ್ರಾಣಿಯನ್ನಾಗಿ ಮಾಡಿದ್ದಾರೆ.

ಕಾಶ್ಮೀರಿ ಪಂಡಿತರು, ಅಸ್ಸಾಂ, ಬಂಗಾಳ್, ಒರಿಸ್ಸಾದ ಬ್ರಾಹ್ಮಣರು ಇವತ್ತಿಗೂ ಮೀನು-ಮಾಂಸ ಮನೆಯಲ್ಲಿ ಬೇಯಿಸಿ ತಿನ್ನುತ್ತಾರೆ. ಮದುವೆ, ಮುಂಜಿಗಳಲ್ಲಿ ಮಾಂಸದೂಟ ಬಡಿಸುತ್ತಾರೆ. ಹೀಗೆ ಹಿಂದೂಗಳಲ್ಲಿ ಈಗಲೂ ಗೋಮಾಂಸ ತಿನ್ನುತ್ತಾರೆ. ಆದರೆ ವೇದ ಕಾಲದ ಚರಿತ್ರೆಯಿಂದ ಈ ಭಾಗ ತೆಗೆಯುವುದರಿಂದ, ವೇದಗಳ ಕಾಲದಲ್ಲಿ ಈ ಅಭ್ಯಾಸ ಇರಲಿಲ್ಲ. ಇದು ಇತ್ತೀಚಿನದು. ವೇದಗಳ ಕಾಲ ಭವ್ಯವಾದುದು, ಎಂಬ ತಪ್ಪು ಕಲ್ಪನೆಯನ್ನು ಇದು ಬೆಳೆಸುತ್ತದೆ. ಇದು ಕೇಸರೀಕರಣದ ಒಂದು ಭಾಗ.

ಜೆ.ಎಸ್.ರಾಜ್‌ಪುತ್‌ರವರ ನಿರ್ದೇಶನದ ಅಡಿಯಲ್ಲಿ 10ನೆಯ ತರಗತಿಯ ಬಿ.ಕೋರ್ಸಿನ ಹಿಂದಿ ಪಠ್ಯ ಪುಸ್ತಕ ಸಂಚಾಲಕ 2 ರಲ್ಲಿ ಚಾರಿತ್ರಿಕ ಘಟನೆಗಳನ್ನು ನಿಖರವಾಗಿ ಬರೆಯದೇ ತಿರುಚಲಾಗಿದೆ.

ಸಂಚಾಯಿಕ ಭಾಗ 2 ರಲ್ಲಿ ಇರುವ ಅಂಶಗಳನ್ನು ಮತ್ತು ವಾಸ್ತವಾಂಶಗಳನ್ನು ಕೆಳಗೆ ಕೊಟ್ಟಿದೆ.

ಭಾರತೀಯ ಕಾಂಗ್ರೆಸ್ಸನ್ನು 1885ರಲ್ಲಿ ಸ್ಥಾಪಿಸಲಾಯಿತು. ಇದರ ಮೊದಲ ಸಭೆ 1889ರಲ್ಲಿ ಸೇರಿತು.

ವಾಸ್ತವಾಂಶ : ಭಾರತೀಯ ಕಾಂಗ್ರೆಸ್ಸು 1885ರಲ್ಲಿ ಸ್ಥಾಪಿಸಲಾಯಿತು. ಆದರೆ ಅದರ ಮೊದಲ ಸಭೆ 1885ರಲ್ಲೇ ನಡೆಯಿತು.

1748ರಲ್ಲಿ ಯುರೋಪಿನಿಂದ ವ್ಯಾಪಾರಿಗಳು ಭಾರತಕ್ಕೆ ಬರಲಾರಂಭಿಸಿದರು. ಇದರಲ್ಲಿ ಪೋರ್ಚುಗೀಸರು, ಫ್ರೆಂಚರು ಮತ್ತು ಇಂಗ್ಲಿಷರು ಸೇರಿದ್ದರು.

ವಾಸ್ತವಾಂಶ : ವಾಸ್ಕೋಡಿಗಾಮ ಕಲ್ಲಿಕೋಟೆಗೆ ಬಂದದ್ದು 1498ರಲ್ಲಿ. ಆಲ್ಬುಕರ್ಕ್‌ಗೋವಾವನ್ನು ಗೆದ್ದಿದ್ದು 1510; ಈಸ್ಟ್ ಇಂಡಿಯಾ ಕಂಪನಿ ಸಂಸ್ಥಾಪನೆಯಾದದ್ದು 1600ರಲ್ಲಿ ಮತ್ತು ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿ ಸಂಸ್ಥಾಪನೆಯಾದದ್ದು 1640ರಲ್ಲಿ. ಮಾರ್ಚ್ 23, 1931ರಂದು ಭಗತ್ ಸಿಂಗ್ ಅವರನ್ನು ನೇಣುಗಂಬಕ್ಕೆ ಏರಿಸಿದ ಮೇಲೆ, ಚಂದ್ರಶೇಖರ ಅಜಾದರು ಕ್ರಾಂತಿಕಾರಿ ಪಕ್ಷದ ನಾಯಕತ್ವವನ್ನ ತಾವೆ ವಹಿಸಿಕೊಂಡರು.

**ವಾಸ್ತವಾಂಶ :** ಅಸಾಧ್ಯ ಭಗತ್ ಸಿಂಗ್ ಅವರನ್ನು ನೇಣುಗಂಬಕ್ಕೆ ಏರಿಸುವ ಒಂದು ತಿಂಗಳು ಮುಂಚೆ 1921ನೇ ಇಸವಿ ಫೆಬ್ರವರಿ 27ನೇ ತಾರೀಖು ಚಂದ್ರಶೇಖರ ಆಜಾದ್ ಅವರನ್ನು ಗುಂಡಿಟ್ಟು ಕೊಲ್ಲಲಾಗಿತ್ತು.

1879ರಲ್ಲಿ ಸೆರೆಹಿಡಿದು ಖೈದಿನಲ್ಲಿಟ್ಟದ್ದು ಮತ್ತು 1879ರಲ್ಲಿ ಜೈಲಿನಲ್ಲಿ ಮೃತಪಟ್ಟ ವಾಸುದೇವ ಬಲವಂತ್ ಕಾಡ್ಕೆ ಅವರು ವೀರ್ ಸಾವರ್‌ಕರ್ ಅವರ ಸಮಕಾಲೀನರು.

**ವಾಸ್ತವಾಂಶ :** ಅಸಾಧ್ಯ. ಸಾವರ್‌ಕರ್ ಅವರು ಹುಟ್ಟಿದ್ದೆ 1883ರಲ್ಲಿ ವಾಸುದೇವ ಬಲವಂತ್ ಕಾಡ್ಕೆ ಅವರ ಹೆಸರು ಫಾಡ್ಕೆ ಕಾಡ್ಕೆ ಅಲ್ಲ.

ಆಂಧ್ರ ಪ್ರದೇಶದ ಕ್ರಾಂತಿಕಾರಿ ಚಳವಳಿಯ ನಾಯಕತ್ವ ವಹಿಸಿದ್ದವರು ಸುಭಾಷ್‌ಚಂದ್ರ ಬೋಸ್

ವಾಸ್ತವಾಂಶ : ಸುಭಾಷ್‌ಚಂದ್ರ ಬೋಸ್ ಅವರ ಚಳವಳಿಯ ವ್ಯಾಪ್ತಿ ಭಾರತದಾದ್ಯಂತ ಇತ್ತು.

11ನೇ ಶತಮಾನದಲ್ಲಿ ಮುಹಮ್ಮದ್ ಘೋರಿ ದಂಡೆಯಾತ್ರೆ ಮಾಡುವ ಮುಂಚೆ ಭಾರತದ ಚರಿತ್ರೆಯನ್ನು ವೇದಗಳ ಕಾಲ ಎಂದು ಕರೆಯಲಾಗಿದೆ.

ವಾಸ್ತವಾಂಶ : ವೇದ ಮತ್ತು ಉಪನಿಷತ್ತುಗಳನ್ನು ಬರೆದ ಕಾಲವನ್ನು ವೇದಗಳ ಕಾಲ ಎಂದು ಗುರುತಿಸಲಾಗಿದೆ ಮತ್ತು ಅದು ಕ್ರೈಸ್ಟ್ ಹುಟ್ಟುವ ಹಲವು ಶತಮಾನಗಳ ಮೊದಲೆ ಕೊನೆಗೊಳ್ಳುತ್ತದೆ.

ಕೌಟಿಲ್ಯನ ಅರ್ಥಶಾಸ್ತ್ರ ಎನ್ನುವ ಪುಸ್ತಕವನ್ನು ಚಾಣಕ್ಯ ಬರೆದಿದ್ದಾನೆ.

ವಾಸ್ತವಂಶ : ಪುಸ್ತಕದ ಹೆಸರು ಅರ್ಥಶಾಸ್ತ್ರ.

ಶಂಕರಾಚಾರ್ಯರು ಬರೆದಿರುವ ಪುಸ್ತಕದ ಹೆಸರು ವೇದಾಂತ.

ವಾಸ್ತವಾಂಶ : ವೇದಾಂತ ಎನ್ನುವುದು ಒಂದು ರೀತಿಯ ತತ್ವಶಾಸ್ತ್ರ. (ನೋಡಿ : The Hindustan Time, 19.12.1999)

-ಚರಿತ್ರೆಯ ವಿಕೃತೀಕರಣ - ಭಾರತದ ಬಹುಮುಖೀ ಸಂಸ್ಕೃತಿಯ ಐಕ್ಯತೆಗೆ ಧಕ್ಕೆ (ಪು : 16-17)

ರಾಜ್‌ಪುತ್ ನಿರ್ದೇಶಕರಾದ ಮೇಲೆ ಒಂದೇ ಒಂದು ಬಾರಿಯೂ ಕೇಬ್ ಸಭೆಯನ್ನು ಸೇರಿಸಿಲ್ಲ. ವಾಸ್ತವದಲ್ಲಿ ಕೇಬ್ ಮತ್ತು ಲೋಕಸಭೆಯ ಅನುಮೋದನೆ ಪಡೆದ ಮೇಲೆ ಪಾಠಕ್ರಮ ರಾಷ್ಟ್ರದಲ್ಲಿ ಮಾನ್ಯತೆ ಪಡೆದು ಸ್ವೀಕೃತವಾಗಲು ಅರ್ಹವಾಗುತ್ತದೆ. ಆದರೆ ರಾಜ್‌ಪುತ್‌ಗೆ ಈ ಸಭೆ ಸೇರಿಸುವ ಅಗತ್ಯವೇ ಕಾಣಲಿಲ್ಲ. ಯಾಕೆಂದರೆ ಇವರು ರೂಪಿಸಿದ ಪುಸ್ತಕಗಳಲ್ಲಿ ಧರ್ಮನಿರಪೇಕ್ಷ ಮೌಲ್ಯಗಳು ಉಲ್ಲಂಘನೆಯಾಗಿದ್ದವು.

ಸಿಲಬಸ್ ಸಮಿತಿ ಸಹ ಮನೋಹರ ಜೋಷಿ ಹಾಗೂ ರಾಜಪುತ್‌ರವರ ಉದ್ದೇಶಕ್ಕನುಗುಣವಾಗಿಯೇ ಸ್ಥಾಪನೆ - 'ಗೊಂಡಿತು. ಈ ಸಮಿತಿಗಳಲ್ಲಿ ಕೆ.ಜಿ.ರಸ್ತೋಗಿ ಎಂಬುವವರು ನೇಮಕಗೊಂಡರು. ಕೆ.ಜಿ.ರಸ್ತೋಗಿ ದೇಶ ವಿಭಜನೆಯ ಸಂದರ್ಭದಲ್ಲಿ ಮುಸ್ಲಿಂ ವಸತಿಗೃಹಗಳ ಮೇಲೆ ಹಲ್ಲೆ ಮಾಡುತ್ತಿದ್ದ ದೊಂಬಿಕೋರರ ಜೊತೆ ಸೇರಿಕೊಂಡು ದೊಂಬಿಯೊಂದರಲ್ಲಿ ಭಾಗವಹಿಸಿದಾಗ ಸುಂದರಳಾದ ಮುಸ್ಲಿಂ ಯುವತಿ-ಯೋರ್ವಳನ್ನು ಕೊಂದುದಾಗಿ ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ. ದೊಂಬಿಕೋರರ ಮಧ್ಯೆ ಅವಳಿಗಾಗಿ ಜಗಳ ಪ್ರಾರಂಭವಾದಾಗ ಆ ಯುವತಿಯನ್ನು ಗುಂಡಿಟ್ಟು ಕೊಂದುದಾಗಿ ಆತ ಹೇಳಿಕೊಂಡಿದ್ದಾರೆ. ಆದಾಗ್ಯೂ ಅವರು ಪರಿಷತ್ತಿನಲ್ಲಿ ನೇಮಕಗೊಂಡಿದ್ದರು. ಪಠ್ಯಕ್ರಮ ಬರೆಯುವವರ ಹೆಸರುಗಳನ್ನು ಸಹ ರಾಜ್‌ಪುತ್‌ರವರ ನಿರ್ದೇಶನದಡಿ ಗೋಪ್ಯವಾಗಿ ಇಡಲಾಯಿತು. ಕೇಬ್‌ನ್ನು ಪುನರ‍್ರಚಿಸಬೇಕು. 35 ವರ್ಷಗಳಿಂದ ನಡೆದುಕೊಂಡು ಬಂದ ಪರಂಪರೆಯನ್ನು ಬಿಡಬಾರದು ಎಂದು ನ್ಯಾಯಾಲಯ ಹೇಳಿದರೂ ನಿರ್ದೇಶಕರಾದ ರಾಜ್‌ಪುತ್‌ರಾಗಲೀ ಅಥವಾ ಅಧ್ಯಕ್ಷರಾದ ಮನೋಹರ್ ಜೋಷಿಯವರಾಗಲೀ ಈ ಆದೇಶವನ್ನು ಪಾಲಿಸಲೇ ಇಲ್ಲ.

ಸಂಸ್ಕೃತಭಾಷೆ ಪುರಾತನವಾದುದು. ಒಂದು ಕಾಲದಲ್ಲಿ ಈ ಭಾಷೆಯನ್ನು ಒಂದು ಜನಾಂಗದವರು ಬಿಟ್ಟು ಬೇರೆಯವರು ಕಲಿಯಲು ಸಾಧ್ಯವೇ ಇರಲಿಲ್ಲ. ಸಂಸ್ಕೃತ ದೇವಭಾಷೆ. ಅದನ್ನು ಬೇರೆಯುವರು ಕಲಿತರೆ ಅಪವಿತ್ರವಾಗುತ್ತದೆ ಎಂದು ನಂಬಿಸಲಾಗಿತ್ತು. ಮೂಲದಲ್ಲಿ ಬ್ರಾಹ್ಮಣರಲ್ಲದ ವ್ಯಾಸ, ವಾಲ್ಮೀಕಿ, ವಿಶ್ವಾಮಿತ್ರ, ಕನಕದಾಸ ಇವರುಗಳು ಸಂಸ್ಕೃತ ಕಲಿತಾಗ ಅದು ಹೇಗೆ ಅಪವಿತ್ರವಾಗಲಿಲ್ಲ. ಯಾವ ಭಾಷೆಯೂ ದೇವಭಾಷೆಯಲ್ಲ. ಯಾವ ಭಾಷೆಯೂ ಯಾವ ಕಾರಣಕ್ಕೂ ಅಪವಿತ್ರವಾಗುವುದಿಲ್ಲ.

ಇಲ್ಲಿ ಮೊದಲು ನಾವು ಅರ್ಥ ಮಾಡಿಕೊಳ್ಳಬೇಕಾದುದು ಸಂಸ್ಕೃತ ಭಾಷೆಯನ್ನು ಪರಿಷತ್ತು ಗ್ರಹಿಸುವ ಬಗೆಯನ್ನು ಸಂಸ್ಕೃತ ಭಾಷೆ ಕಲಿತರೆ ಪ್ರಾದೇಶಿಕ ಭಾಷೆ ಕಲಿಯಲು ಸುಲಭವಾಗುತ್ತದೆ ಎನ್ನುವ ವಾದ ಇವರು ಮುಂದಿಡುತ್ತಾರೆ. ಇದು ಭಾಷೆ ಕಲಿಯುವ ಮಕ್ಕಳನ್ನು ತಪ್ಪು ದಾರಿಗೆಳೆಯುತ್ತದೆ. ಪ್ರಾದೇಶಿಕ ಭಾಷೆ ಕಲಿಯುವುದಕ್ಕೂ ಸಂಸ್ಕೃತ ಭಾಷೆಗೂ ಯಾವ ಸಂಬಂಧವೂ ಇಲ್ಲ. ವೇದ ಕಾಲದಿಂದಲೂ ಸಂಸ್ಕೃತ ಆಡುಭಾಷೆಯಾಗಿರಲಿಲ್ಲ. ಹಾಗಾಗಿ ಸಂಸ್ಕೃತಕ್ಕೆ universal appeal ಇದೆ ಎನ್ನುವುದು ಸರಿಯಲ್ಲ.

9 ನೆಯ ತರಗತಿಯ ಸಮಾಜ ವಿಜ್ಞಾನ ಪುಸ್ತಕದಲ್ಲಿ ಈ ಕೆಳಕಂಡಂತೆ ಮಾಹಿತಿ ಕೊಡಲಾಗಿದೆ.

ಚರಿತ್ರೆಯಿಂದ ಈ ಪುಸ್ತಕದಲ್ಲಿ ಕೊಟ್ಟಿರುವ ಮಾಹಿತಿ ಮತ್ತು ವಾಸ್ತವಾಂಶ ಹೀಗಿದೆ।

1. Calcutta is East Bengal ; (ಹೇಳಿಕೆಯೆ ತಪ್ಪು. ಕಲ್ಕತ್ತ ಪಶ್ಚಿಮ ಬಂಗಾಳದಲ್ಲಿರುವ ನಗರ.)
2. Stalin was the first to sign the no war pact with Hitler ; (ತಪ್ಪು)
3. "Persons like Rabindranath Thakur returned their knighthood. " (ಭಾರತದ ನೊಬೆಲ್ ಬಹುಮಾನ ವಿಜೇತ Tagore ಅವರ ಹೆಸರನ್ನುThakur ಎಂದು ಬರೆಯುವುದು ಅವರ ಬಗ್ಗೆ ಅಸಡ್ಡೆ ಮತ್ತು ತಿರಸ್ಕಾರ ತೋರಿಸಿ ಅವಮರ್ಯಾದೆ ಮಾಡಿದಂತೆ.);
4. "World War II was a devastative conflict." (devastating ಎನ್ನುವುದು ಗುಣವಾಚಕ. ಆದರೆ devaste ಎನ್ನುವ ಪದ ಇಂಗ್ಲಿಷಿನಲ್ಲಿ devastative ಎನ್ನುವ ರೂಪ ಪಡೆಯುವುದಿಲ್ಲ.)
5. "The British government was not interested in any substantial instalment of genuine constitutional reform." (ಕಂತುಗಳ ಅಭ್ಯಾಸ ಇತ್ತು ಎನ್ನುವ ಅರ್ಥ ಬರುತ್ತದೆ)
6. "Russia gets into depressed state of mind." (ಇದರ ಅರ್ಥವೇನು ?)
7. "It was under the leadership of Arthur Wellesley that Napolean met his first defeat."(ಆರ್ತರ್ ವೆಲ್ಲೆಸ್ಲಿ ಎನ್ನುವವನು ನೆಪೋಲಿಯನ್ನನ ಸೈನ್ಯದ ನಾಯಕತ್ವ ವಹಿಸಿದ್ದ ಎನ್ನುವ ಅರ್ಥ ಬರುತ್ತದೆ.)
8. ".... besides the Indians, leaders like ....Bose......... Nehru, ......and Sathyamurthy had been demanding complete Independence." ( ಇಲ್ಲಿ ಬೋಸ್, ನೆಹರು ಮತ್ತು ಸತ್ಯಮೂರ್ತಿಯರು ಭಾರತೀಯರಲ್ಲ ಎನ್ನುವ ಅರ್ಥ ಬರುತ್ತದೆ. ಇದು ಕೇವಲ ಅವಿವೇಕದ ಮಾತಲ್ಲ. ಗೊತ್ತಿಲ್ಲದ ಭಾಷೆಯೊಂದರಲ್ಲಿ ರಾಷ್ಟ್ರಕ್ಕೆ ಪಠ್ಯಪುಸ್ತಕ ಬರೆಯುವ ದುರಾಸೆ)
9. ಗಾಂಧೀಜಿಯವರ ಕೊಲೆಯನ್ನು ಚರಿತ್ರೆ ಪುಸ್ತಕದಲ್ಲಿ ನಮೂದಿಸದೆ ಬಿಡಲಾಗಿದೆ.

ಪರಿಷತ್ತಿನಲ್ಲಿ ನಡೆದ ವಿವಿಧ ರಾಜ್ಯಗಳ ವಿದ್ಯಾಮಂತ್ರಿಗಳ ಸಭೆಯಲ್ಲಿ ನಾಥೂರಾವ್ ಗೋಡ್ಸೆ ಅವರನ್ನು ಹಿಂದೂ ಮೂಲಭೂತವಾದಿಗಳ ಗುಂಪಿಗೆ ಸೇರಿದವರು ಎಂದು ಬರೆಯಬೇಕೆಂದು ಕೇಳಿದಾಗ, ರಾಜ್‌ಪುತ್ ಅವರು ಹಾಗೆ ಬರೆಯಲು ಸಾಧ್ಯವಿಲ್ಲವೆಂದೂ, ಹಾಗೆ ಬರೆದರೆ ಸಮಾಜದ ಒಂದು ಜನಾಂಗಕ್ಕೆ ನೋವಾಗುತ್ತದೆ ಎಂದು ಹೇಳಿ ಸಲಹೆಯನ್ನು ತಿರಸ್ಕರಿಸಿದರು.

**ಉಳಿದ ತಪ್ಪುಗಳು**

- King Harsha was a shivite
- Netaji Subhas Chandra Bose liberated the Andaman islands with Japan's help
- "Free Goa" volunteers "backed by the Jan Sangh" captured Dadra and Nagar Haveli.
- Housing societies had begun in the Neolithic Age.
- Russian Revolution described as a coup.
- ಶ್ಯಾಮ್ಜಿ ಕೆ ಶರ್ಮ ಅವರು ಆಗಸ್ಟ್ ಕೋಮ್ಟ್ ಅವರ ಸಹಕಾರ ಪಡೆದು ಒಂದು ನಿಯತಕಾಲಿಕವನ್ನು ನಡೆಸುತ್ತಿದ್ದರು ಎಂದು ಬರೆಯಲಾಗಿದೆ. ಸಮಾಜ ವಿಜ್ಞಾನದ ಪಿತಾಮಹ ಎನಿಸಿಕೊಂಡ ಆಗಸ್ಟ್ ದಿ ಕೋಮ್ಟ್ ಅವರು ಸತ್ತಿದ್ದು 1887ರಲ್ಲಿ. ಶ್ಯಾಮ್ಜಿ ಕೆ ಶರ್ಮ ಅವರು ಹುಟ್ಟಿದ್ದೆ 1887ರಲ್ಲಿ.

ಪರಿಷತ್ತಿನಲ್ಲಿ ಪುಸ್ತಕಗಳನ್ನು ಬರೆದ ಮೇಲೆ ಮುದ್ರಣಕ್ಕೆ ಕಳುಹಿಸುವ ಮುಂಚೆ ಪರಿಣತರನ್ನು ಕರೆಸಿ ಕಮ್ಮಟ ನಡೆಸಿ

ಅವನ್ನು ಪರಿಶೀಲನೆಗೊಳಪಡಿಸುವ ಅಭ್ಯಾಸವಿದೆ. ಇಂಥ ಐದು ದಿನಗಳ ಕಮ್ಮಟ ಒಂದಕ್ಕೆ ಹೋಗಿದ್ದ 25 ವರ್ಷಗಳ ಅನುಭವವಿದ್ದ ಸರ್ದಾರ ಪಟೇಲ್ ವಿದ್ಯಾಲಯದ ಚರಿತ್ರೆ ಅಧ್ಯಾಪಕಿ ಚಿತ್ರಾ ಶ್ರೀನಿವಾಸನ್ ಅವರು 9 ನೇ ತರಗತಿಯ ಪುಸ್ತಕದಲ್ಲಿದ್ದ ತಪ್ಪುಗಳನ್ನು ಎತ್ತಿತೋರಿಸಿದರೂ ಅವನ್ನು ಕಡೆಗಣಿಸಲಾಯಿತು.ಉದಾಹರಣೆಗೆ, ಈ ಪುಸ್ತಕದಲ್ಲಿ ಬರುವ ಒಂದು ಹೇಳಿಕೆ ಹೀಗಿದೆ: Some freedom fighters "died with Gita in their hands". ಅದಕ್ಕೆ ಚಿತ್ರಾ ಅವರು "Since many like Bhagat Singh had not done so and were no less martyrs."ಎಂದು ಹೇಳಿದಾಗ ಚಿತ್ರಾ ಅವರಿಗೆ ಪರಿಷತ್ತಿನ ವಿದ್ವಾಂಸರು ಹೇಳಿದುದನ್ನು ಈ ರೀತಿ ಹೇಳಿಕೊಂಡಿದ್ದಾರೆ : "I was immediately told that people like me do (ಚರಿತ್ರೆಯ ವಿಕೃತೀಕರಣ - ಭಾರತದ ಬಹುಮುಖೀ ಸಂಸ್ಕೃತಿಯ ಐಕ್ಯತೆಗೆ ಧಕ್ಕೆ)

**(ಪು. 61. 62, 63)**

ಇಂತಹ ಅನೇಕ ತಪ್ಪುಗಳ ಮಾಹಿತಿಯನ್ನು ಚರಿತ್ರೆಯ ವಿಕೃತೀಕರಣ ಪುಸ್ತಕ ಎತ್ತಿ ತೋರಿಸುತ್ತದೆ. ಭಾ.ಜ.ಪ. ಪರಿಷತ್ತಿನ ಮೂಲಕ ಶಾಲಾ ಪಠ್ಯ ಪುಸ್ತಕಗಳಲ್ಲಿ ಕೇಸರೀಕರಣ, ತಾಲಿಬಾನೀಕರಣ ಹೇರಲು ಪ್ರಯತ್ನಿಸಿದ್ದು ಈಗ ಎಲ್ಲರಿಗೂ ತಿಳಿದಿರುವ ವಿಚಾರ.

ಈ ಪುಸ್ತಕ - ಸಾಕ್ಷಿ, ಆಧಾರ, ಸಂಶೋಧನೆಯ ಮೂಲಕ ಭಾ.ಜ.ಪ.ದ ಕೇಸರೀಕರಣದ ಪ್ರಯತ್ನಗಳನ್ನು ಎತ್ತಿ ಹಿಡಿದು ತೋರಿಸುವುದರಿಂದ ಇದೊಂದು ಓದಲೇಬೇಕಾದ ಮುಖ್ಯ ಪುಸ್ತಕವಾಗಿದೆ.

*******

# "ಸಂಚಾರಂ" - ಸಲಿಂಗ ಕಾಮದ ದೃಶ್ಯಕಾವ್ಯ

-ಶ್ಯಾಮಲ, ಕೋಲಾರ

ಖ್ಯಾತ ಸಾಹಿತಿ, ಪತ್ರಕರ್ತ ಲಂಕೇಶ್ ಅವರ ಸ್ಮರಣಾರ್ಥ ರಾಷ್ಟ್ರೀಯ ಮಟ್ಟದಲ್ಲಿ ಹೊಸ ನಿರ್ದೇಶನದ ಮೊದಲ ಚಿತ್ರಕ್ಕೆ ಅವರ ಮಗಳು ಹಾಗೂ ನಿರ್ದೇಶಕಿ ಕವಿತಾ ಲಂಕೇಶ್ "ಲಂಕೇಶ್ ಚಿತ್ರ ಪ್ರಶಸ್ತಿ" ಯನ್ನು ನೀಡುತ್ತಿದ್ದು, ಪ್ರಥಮ ವರ್ಷದ ಪ್ರಶಸ್ತಿಯನ್ನು ಮಲಯಾಳಂ ಚಿತ್ರ 'ಸಂಚಾರಂ' ಪಡೆದುಕೊಂಡಿದೆ.

ಈ ಚಿತ್ರದ ನಿರ್ದೇಶಕಿ ಷಿಕಾಗೋದಲ್ಲಿ ನೆಲೆಸಿರುವ ಲಿಜಿ.ಜೆ. ಪುಲ್ಲಾಪ್ಪಳಿ ಅವರಿಗೆ ಕಳೆದ ಮಾರ್ಚ್ 20 ರಂದು ಪ್ರಶಸ್ತಿ ಪ್ರದಾನ ಮಾಡಿದ ನಂತರ ಬೆಂಗಳೂರಿನ ಎಡಿಎ ರಂಗ ಮಂದಿರದಲ್ಲಿ ಚಿತ್ರ ಪ್ರದರ್ಶನವಾಯಿತು.

'ಸಂಚಾರಂ' ಚಿತ್ರದ ಕಥಾವಸ್ತು ಗ್ರಾಮೀಣ ಪರಿಸರದ ಇಬ್ಬರು ಹುಡುಗಿಯರ (ನಡುವೆ ಆಕುಂರವಾಗುವ) ಮಧ್ಯದ ಸಲಿಂಗ ಕಾಮ (ಲೆಸ್ಬಿಯನಿಸಂ) ದ ಭಾವನೆಗಳಕುರಿತದ್ದು. ಚಿತ್ರದ ಕಥಾನಾಯಕಿಯರು ಕಿರಣ್ ಮತ್ತು ಡೆಲಿಲಾ. ಚಿತ್ರ ಪ್ರಾರಂಭವಾಗುವುದೇ ಕಿರಣ್ ನೀರಿನ ಪ್ರಪಾತದ ಮುಂದೆ ಸೋತು, ನಿರಾಶಳಾಗಿ ನಿಂತಿರುವ ದೃಶ್ಯದಿಂದ. ನಂತರ ಫ್ಲಾಶ್ ಬ್ಯಾಕ್‌ನಲ್ಲಿ ಇವರ ಬಾಲ್ಯದಿಂದ ಕಥೆ ಶುರುವಾಗುತ್ತದೆ.

ದೆಹಲಿಯಿಂದ ಕೇರಳದ ತಮ್ಮ ಹಳ್ಳಿಗೆ ವಾಪಸ್ಸಾಗುವ ಪ್ರಿಯಾ - ನಾರಾಯಣ್‌ರ ಒಬ್ಬಳೇ ಮಗಳು ಕಿರಣ್. ತಮ್ಮ ಪೂರ್ವಿಕರ ಮನೆಗೆ ಬರುವ ಕಿರಣ್‌ಗೆ ಹಳ್ಳಿಯ ಹಸಿರು ಕಾಡಿನ ನಡುವೆ ಇರುವ ಮನೆ, ಅಲ್ಲಿಯ ವಸ್ತುಗಳು, ಕೋಣೆಗಳು, ಹಳೇ ಕಾಲದ ಒಡವೆಗಳು ಪ್ರತಿಯೊಂದು ತೀರಾ ಅಪರೂಪವಾಗಿ ಕಾಣುತ್ತದೆ. ಎಲ್ಲರನ್ನೂ ಸೂಕ್ಷ್ಮವಾಗಿ ಗಮನವಿಟ್ಟು ನೋಡುತ್ತಾಳೆ. ಅಂದೇ ತನ್ನ ಮನೆಯ ಪಕ್ಕದಲ್ಲಿರುವ ಕ್ರಿಶ್ಚಿಯನ್ ತ್ರೇಸಿಯಮ್ಮನ ಮಗನ ಮದುವೆ. ಈ ಮದುವೆಯಲ್ಲೇ ಅವರ ಒಬ್ಬಳೇ ಮಗಳು ಡೆಲಿಲಾಳನ್ನು ಕಿರಣ್ ಭೇಟಿಯಾಗುತ್ತಾಳೆ. ಹೀಗೆ ಬಾಲ್ಯದಿಂದಲೇ ಆತ್ಮೀಯ ಗೆಳತಿಯರಾಗಿ ಬೆಳೆಯುತ್ತಾರೆ. ಕಿರಣ್ ಬಾಲ್ಯದಿಂದಲೇ ಸ್ವಲ್ಪ ಭಾವುಕಳು, ಓದಿನಲ್ಲಿ ಮುಂದು. ಡೆಲಿಲಾ ಸ್ವಭಾತಃ ತುಂಟಿ. ಜೊತೆಯಲ್ಲೇ ಆಟ ಪಾಠ. ಹೀಗೆ ಬೆಳೆಯುವ ಇವರ ಬಾಲ್ಯ ತುಂಟಾಟಗಳಲ್ಲಿ ಅರಳುತ್ತಾ, ಇವರ ಸ್ನೇಹ ದೊಡ್ಡವರಾಗುತ್ತಾ ಗಟ್ಟಿಯಾಗುತ್ತಾ ಸಾಗುತ್ತದೆ.

ಗ್ರಾಮೀಣ ಸೊಗಡಿನಲ್ಲಿ, ನಿಶ್ಕಲ್ಮಶವಾದ ವಾತಾವರಣದಲ್ಲಿ ಬೆಳೆಯುವ ಇವರಿಬ್ಬರು ಜೊತೆಯಲ್ಲೇ ಕಾಲೇಜು ಮೆಟ್ಟಿಲೇರುತ್ತಾರೆ. ಕಿರಣ್‌ಗೆ ಕವಿತೆ ಬರೆಯುವ ಹವ್ಯಾಸ. ಅವಳ ಕಾವ್ಯರಚನೆಗೆ ತಾಯಿತಂದೆ ಹಾಗೂ ಉಪನ್ಯಾಸಕಿಯ ಪ್ರೋತ್ಸಾಹ ದೊರೆಯುತ್ತದೆ. ಕಿರಣ್‌ಗೆ ಗೊತ್ತಿಲ್ಲದೇ ಅವಳ ಕಾವ್ಯಕ್ಕೆ ಡೆಲಿಲಾಳೇ ಸ್ಫೂರ್ತಿ.

ಎಷ್ಟು ಓದಿದರೂ ತಲೆಗೆ ಹತ್ತದ ಡೆಲಿಲಾಗೆ ಸಹಾಯ ಮಾಡಲು ಜೊತೆಯಲ್ಲೇ ಓದುತ್ತಿದ್ದ ಒಂದು ರಾತ್ರಿ ಡೆಲಿಲಾ ಮತ್ತು ತನ್ನ ನಡುವೆ ಇರುವಂತಹ ಆಕರ್ಷಣೆಯನ್ನು ಕಂಡುಕೊಳ್ಳುತ್ತಾಳೆ. ಈ ಆಕರ್ಷಣೆಯನ್ನು ಅರ್ಥ ಮಾಡಿಕೊಳ್ಳಲು ಕಷ್ಟಪಡುತ್ತಾಳೆ, ಗೊಂದಲಕ್ಕೊಳಗಾಗುತ್ತಾಳೆ, ಮುಜಗರಗೊಳ್ಳುತ್ತಾಳೆ. ಆದರೆ ಸಹಜವಾಗಿ ಹುಟ್ಟಿದಂತಹ ಪ್ರೀತಿಯನ್ನು ಮರೆಮಾಚುವಲ್ಲಿ ಸೋಲುತ್ತಾಳೆ. ಇವರೊಟ್ಟಿಗೆ ಓದುವ ರಾಜನ್‌ಗೆ ಡೆಲಿಲಾಳ ಮುಗ್ಧತೆ ಕಂಡು ಪ್ರೀತಿಸುತ್ತಾ ಅವಳ ಹಿಂದೆ ತಿರುಗಲು ಶುರು ಮಾಡುತ್ತಾನೆ. ತನ್ನೊಳಗೆ ಇರುವಂತಹ ಗೊಂದಲ

ಮರೆಮಾಚಲು ಕಿರಣ್ ಇವರಿಬ್ಬರನ್ನು ಒಂದು ಮಾಡಲು ಸಹಕರಿಸಲು ನೋಡುತ್ತಾಳೆ. ಇಷ್ಟೆಲ್ಲಾದರ ನಡುವೆ ತನ್ನಲ್ಲಿ ಹುಟ್ಟಿರುವ ಪ್ರೀತಿಯ ಭಾವನೆಗಳನ್ನು ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಪಡಿಸುತ್ತಿರುತ್ತಾಳೆ. ಇದ್ಯಾವುದರ ಅರಿವೇ ಇಲ್ಲದ ಡೆಲಿಲಾಗೆ ಇತ್ತೀಚಿಗೆ ಕಿರಣ್‌ಳ ವರ್ತನೆಯಲ್ಲಾದ ಬದಲಾವಣೆಯನ್ನು ಗಮನಿಸುತ್ತಾಳೆ. ಅದನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಒಂದು ದಿನ ಕೊಳದಲ್ಲಿ ಸ್ನಾನ ಮಾಡುತ್ತಿರುವಾಗ ಕಿರಣ್‌ಳ ಪ್ರೀತಿಗೆ ಸ್ಪಂದಿಸುತ್ತಾಳೆ. ಹೀಗೆ ಅವರ ಪ್ರೀತಿ ಪ್ರಣಯ ಕದ್ದುಮುಚ್ಚಿ ಮುಂದುವರೆಯುತ್ತದೆ. ಜೀವನದ ಕೊನೆಯುವರೆಗೂ ಜೊತೆಯಲ್ಲೇ ಬದುಕುವ ಮಾತುಗಳನ್ನು ಆಡುತ್ತಾರೆ. ಕೆಲವು ದಿನಗಳ ನಂತರ ಇವರಿಬ್ಬರ ಸಂಬಂಧ ಹೊರ ಜಗತ್ತಿಗೆ ಗೊತ್ತಾಗುತ್ತಾ ಹೋಗುತ್ತದೆ. ಡೆಲಿಲಾಳ ತಾಯಿ ಮನೆಯಿಂದ ಹೊರ ಹೋಗದಂತೆ ಬಂಧಿಸುತ್ತಾಳೆ. ಹಾಗೆಯೇ ಅವಳಿಗೆ ಬೇರೆ ಕಡೆ ಮದುವೆ ಮಾಡಲು ಪ್ರಯತ್ನಿಸುತ್ತಾಳೆ. ಇತ್ತ ಕಿರಣ್‌ಳ ತಾಯಿ ತಂದೆ ಬುದ್ಧಿ ಹೇಳುತ್ತಾರೆ. ಕಾಲೇಜಿನಲ್ಲಿ ಎಲ್ಲರಿಗೂ ವಿಷಯ ಗೊತ್ತಾಗುತ್ತದೆ. ಎಲ್ಲಾ ಕಡೆಯಿಂದಲೂ ಅವಮಾನ ಅನುಭವಿಸುತ್ತಾರೆ.

ಇತ್ತ ಡೆಲಿಲಾಳಿಗೆ ವಿದೇಶದಿಂದ ಬಂದಂತಹ ಹುಡುಗನ ಒಟ್ಟಿಗೆ ಮದುವೆ ಗೊತ್ತಾಗುತ್ತದೆ. ಈ ಮದುವೆ ಒಪ್ಪದಿರುವಂತೆ, ತಾವೆಲ್ಲಾದರೂ ಓಡಿಹೋಗಿ, ದುಡಿದು ಜೀವನ ಮಾಡೋಣವೆಂದು ಕಿರಣ್ ಡೆಲಿಲಾಳನ್ನು ಬೇಡಿಕೊಳ್ಳುತ್ತಾಳೆ.

**ಲಂಕೇಶ್ - 80, ಹೊಸ ಪತ್ರಿಕೆ ಲಂಕೇಶ್ ಬಿಡುಗಡೆ, ಹಾಗೂ ಲಂಕೇಶರ ಸ್ಮರಣಾರ್ಥ ಚಿತ್ರೋತ್ಸವ ಪ್ರಶಸ್ತಿ ಇವೆಲ್ಲ ಒಳಗೊಂಡ ಮಾರ್ಚ 8 2005 ರ ಸಮಾರಂಭದಂದು ಲಿಜಿ.ಜೆ. ಪುಲ್ಲಾಪ್ಪಳಿಯವರ 'ಸಂಚಾರಂ' ಚಲನಚಿತ್ರ ತೋರಿಸಲಾಯಿತು. ಇದಕ್ಕೆ ಮೊದಲು ಮಾತನಾಡಿದ ಹಾಗೂ ಚಿತ್ರದ ಆಯ್ಕೆಯ ಕಮಿಟಿಯಲ್ಲಿದ್ದ ಶ್ರೀ ಶಿವರಾಂ ಹಾಗೂ ಮರುಳುಸಿದ್ದಪ್ಪ ಚಿತ್ರದ ಕಾವ್ಯಾತ್ಮಕತೆ ಹಾಗೂ ಸಹಜತೆ ಇವುಗಳೇ 'ಸಂಚಾರಂ'ನ ಮೌಲಿಕತೆ ಹೆಚ್ಚಿಸಿವೆ ಎಂದರು. ಸ್ವಲ್ಪ ಎಚ್ಚರ ತಪ್ಪಿದ್ದರೂ ಅಶ್ಲೀಲವೆಂದೆನಿಸಬಹುದಾಗಿದ್ದ ಈ ಸಿನೆಮಾವನ್ನು ನಿರ್ದೇಶಕಿ ಬಹಳ ಉತ್ತಮ ರೀತಿಯಲ್ಲಿ ನಿರ್ದೇಶಿಸಿದ್ದಾರೆ ಎಂದೂ ಕೂಡಾ ಅಭಿಪ್ರಾಯ ಪಟ್ಟರು.**

**ಚಿತ್ರದ ಪ್ರದರ್ಶನದ ನಂತರ ನಿರ್ದೇಶಕಿ ಲಿಜಿ.ಜೆ. ಪುಲ್ಲಾಪ್ಪಳಿಯವರೊಂದಿಗೆ ಒಂದು ಅನೌಪಚಾರಿಕ ಮಾತು-ಕತೆಯಲ್ಲಿ ಈ ಕೆಳಕಂಡ ಹಲವಾರು ಅಭಿಪ್ರಾಯಗಳು ವ್ಯಕ್ತಗೊಂಡವು.**

**ಈ ಚಿತ್ರದ ಪ್ರೇರಣೆಯ ಬಗ್ಗೆ ಮಾತನಾಡುತ್ತಾ ನಿರ್ದೇಶಕಿ ತಾವು ಶಿಕಾಗೋದಲ್ಲಿ ಸಲಿಂಗರತಿ, ಹಾಗೂ ಇತರ ಮೂರನೇ ಜೆಂಡರ್ ಜೊತೆ ಕೆಲಸ ಮಾಡುತ್ತಿರುವ ಸಂದರ್ಭದಲ್ಲಿ ಕೇರಳದಲ್ಲಿ ಇಬ್ಬರು ಹುಡುಗಿಯರು ಸಂಬಂಧ ಹೊಂದಿದ್ದು, ಸಮಾಜದ ಒತ್ತಡದಿಂದಾಗಿ ಆತ್ಮಹತ್ಯೆ ಮಾಡಿಕೊಂಡುದನ್ನು 'ಇ' ಮೇಲ್‌ನಲ್ಲಿ ನೋಡಿದುದಾಗಿ ಹೇಳಿದರು. ಆ ಘಟನೆಯೇ ಈ ಚಿತ್ರಕ್ಕೆ ಪ್ರೇರಣೆ ನೀಡಿದ್ದು ಎಂದು ನಿರ್ದೇಶಕಿ ನುಡಿದರು. ಕಿರಣ್‌ಳನ್ನು ಚಿತ್ರಿಸುವಾಗ ಅವರು ಟಾಮ್ ಬಾಯ್ ಕಲ್ಪನೆಗೆ ಮೊರೆಹೋಗಿದ್ದರೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಾ - ಕಿರಣ್ ಇಡೀ ಚಿತ್ರದಲ್ಲಿ ಜುಬ್ಬಾ, ಪೈಜಾಮ ಧರಿಸುವುದರ ಬಗ್ಗೆ ವಿವರಣೆ ನೀಡಿದರು.**

**ಎರೆಡು ಭಿನ ಸೆನ್ಸಿಬಿಲಿಟಿ ತೋರಿಸುವುದಷ್ಟೇ ತಮ್ಮ ಉದ್ದೇಶವಾಗಿತ್ತು ಎಂದರು. ಚಿತ್ರ ವೀಕ್ಷಿಸಿದ ಪ್ರೇಕ್ಷಕರೊಬ್ಬರು ಬಹಳ disturb ಆಗಿ, - ಈ ಚಿತ್ರದ ಉದ್ದೇಶ, ಸಂದೇಶ ಏನು ? ಈ ಹೆಣ್ಣು ಮಕ್ಕಳ ಸಂಬಂಧ ತೋರಿಸುವ ಅಗತ್ಯವಾದರೂ ಏನಿತ್ತು ? ಎಂದು ಹಲವಾರು ಪ್ರಶ್ನೆ ಕೇಳಿದರು, ನಿರ್ದೇಶಕಿಯ ಜೊತೆಗೆ ಕವಿತಾ ಲಂಕೇಶ್ ಕೂಡಾ ಪ್ರತಿಕ್ರಯಿಸಿದರು. ಗಂಡು-ಹೆಣ್ಣಿನ ಸಂಬಂಧದಷ್ಟೇ ಸಹಜವಾಗಿ ಈ ಸಂಬಂಧಗಳನ್ನೂ ಒಪ್ಪಿಕೊಳ್ಳಬೇಕು. ಸಹಜವಾದ ಈ ಹುಡುಗಿಯರ ನಡುವಿನ ಸಂಬಂಧವನ್ನು ಪ್ರತಿರೋಧಿಸುವ ನಮ್ಮ ಮನಸ್ಸು, ನಂಬಿಕೆಗಳನ್ನು ನಾವು ಕೂಡಾ ಪ್ರಶ್ನಿಸಿಕೊಳ್ಳುವ ಅಗತ್ಯವಿದೆ ಎಂದರು. ಈ ಚಿತ್ರಕ್ಕೆ ಉತ್ತಮ ಪ್ರತಿಕ್ರಿಯೆ ಎಲ್ಲಾ ಕಡೆ ದೊರಕಿರುವುದಾಗಿ ನಿರ್ದೇಶಕಿ ನುಡಿದರು.**

**'ಸಂಚಾರಂ' ಚಿತ್ರ ಸಾಂಪ್ರದಾಯಿಕ ವಾತಾವರಣದಲ್ಲಿ ರೂಪುಗೊಂಡಿರುವುದರಿಂದ ಅದಕ್ಕೆ ಜನ ಸಾಮಾನ್ಯರಿಂದ ಕೂಡಾ ಒಪ್ಪಿಗೆ ಸಿಗುತ್ತಿರುವುದು ನಿಜ ಎಂಬುದನ್ನೂ ಕೂಡಾ ನಿರ್ದೇಶಕಿ ಒಪ್ಪಿಕೊಂಡರು. ಇದೇ ಚಿತ್ರ ಕೇರಳದ ಹಳ್ಳಿಯೊಂದರಲ್ಲಿ, ಸಾಂಪ್ರದಾಯಿಕ ವಾತಾವರಣದಲ್ಲಿ, ಇಬ್ಬರು ಹುಡುಗಿಯರ ನಡುವೆ ಸಹಜವಾಗಿ ಮೂಡಿ ಬಂದ ರೀತಿಯಲ್ಲಿಯೇ ಒಂದು ರೀತಿಯ ಕಾವ್ಯಾತ್ಮಕತೆ ಹೊಂದಿದೆ ಎಂಬ ಅಂಶ ಹಲವಾರು ಮಂದಿಯ ಅಭಿಪ್ರಾಯವಾಗಿತ್ತು. ಈ ಸಿನೆಮಾದ ಕೊನೆಯ ಭಾಗ ಕೂಡಾ ಆಶಾವಾದಿ ಭಾವನೆಯಲ್ಲಿಯೇ ಮುಕ್ತಾಯಗೊಳ್ಳುತ್ತದೆ. ಸಾಯಬೇಕೆಂದು ಎಣಿಸುವ ಕಿರಣ್ ಬದುಕುವ ಹಾಗೂ ತನ್ನ ಹುಡುಕಾಟ ಮುಂದುವರಿಸುವ ನಿರ್ಧಾರಕ್ಕೆ ಬರುವುದು. ಆಕೆ ಜೀವನದ ಸಂಚಾರವನ್ನು ಮುಂದುವರಿಸುತ್ತಾಳೆ ಎನ್ನುವ ಆಶಾವಾದದಲ್ಲಿ ಸಿನೆಮಾ ಮುಕ್ತಾಯವಾಗುತ್ತದೆ.**

ಇದಕ್ಕೆ ಬೇಕಾದ ತಯಾರಿಗೆ ದೂರದ ಚಿಕ್ಕಪ್ಪನ ಸಹಾಯವನ್ನುಗೆ ದೂರದ ಚಿಕ್ಕಪ್ಪನ ಸಹಾಯವನ್ನು ಬೇಡುತ್ತಾಳೆ. ಆದರೆ ಧೈರ್ಯವಿಲ್ಲದ ಡೆಲಿಲಾ ಕಿರಣ್ ಒಟ್ಟಿಗೆ ಹೋಗಲು ಒಪ್ಪುವುದಿಲ್ಲ. ಭಾವುಕಳಾದ ಕಿರಣ್ ಕುಗ್ಗಿ, ಸೋತು ಚಡಪಡಿಸುತ್ತಾಳೆ. ಇತ್ತ ಡೆಲಿಲಾಳ ಮದುವೆ ಚರ್ಚ್‌ನಲ್ಲಿ ನಡೆಯುತ್ತಿದ್ದರೆ, ಅವಳನ್ನು ಬಿಟ್ಟಿರಲಾರದ ಕಿರಣ್ ನೀರಿನ ಪ್ರಪಾತದಲ್ಲಿ ಬಿದ್ದು ಅತ್ಮಹತ್ಯೆ ಮಾಡಿಕೊಳ್ಳಲು ಹೋಗುತ್ತಾಳೆ. ಭಾವನೆಗಳನ್ನು ಹತ್ತಿಕ್ಕಲಾರದ ಡೆಲಿಲಾ ಮದುವೆಯಲ್ಲೇ ಕುಸಿಯುತ್ತಾಳೆ. ಇತ್ತ ಆತ್ಮಹತ್ಯೆ ಮಾಡಿಕೊಳ್ಳಲು ಹೋದ ಕಿರಣ್ ಸ್ವೇಚ್ಛಂದವಾಗಿ ಹಾರಾಡುತ್ತಿದ್ದ ಒಂದು ಚಿಟ್ಟೆಯನ್ನು ನೋಡಿ ಬೇರೊಂದು ಸಂಗಾತಿಯ ಹುಡುಕಾಟದ ಛಲದ ನಿರ್ಧಾರದೊಂದಿಗೆ ಹಿಂತಿರುಗುವುದರೊಂದಿಗೆ ಚಿತ್ರ ಅಂತ್ಯಗೊಳ್ಳುತ್ತದೆ. ತನ್ನ ಹುಡುಕಾಟದ journey ಮುಂದುವರೆಯುತ್ತದೆ. ಇದೇ 'ಸಂಚಾರಂ'.

ಒಟ್ಟಾರೆಯಾಗಿ ಈ ಚಿತ್ರ ಗ್ರಾಮೀಣ ಪರಿಸರದಲ್ಲಿ ಯಾವುದೇ ಅಬ್ಬರವಿಲ್ಲದೇ ಸಹಜವಾಗಿ ಚಿತ್ರೀಕರಿಸಲಾಗಿದೆ. ಹೊರ ಜಗತ್ತು ಒಪ್ಪದಿರುವಂತಹ ಕಥಾವಸ್ತುವನ್ನು ತೀರಿ ಸೂಕ್ಷ್ಮವಾಗಿ, ಎಲ್ಲೂ ಅಶ್ಲೀಲ ಎನಿಸದಂತೆ ಚಿತ್ರವನ್ನು ಲಿಜಿ.ಜೆ. ಪ್ರಲ್ಲಾಪ್ಪಳಿ ನಿರ್ದೇಶಿಸಿದ್ದಾರೆ. ಸಾಂಪ್ರಾದಾಯಿಕ ಪರಿಸರದಲ್ಲಿ ಇಬ್ಬರೂ ಹುಡುಗಿಯರ ಮನಸ್ಸಿನಲ್ಲಿ ಹಟ್ಟುವ ಪ್ರೀತಿಯ ಭಾವನೆಗಳು, ವ್ಯಕ್ತಪಡಿಸುವ ಸಂದರ್ಭಗಳು ಸಂಕೀರ್ಣವಾದ ಗೊಂದಲಗಳು, ಘರ್ಷಣೆ ಹಾಗೂ ತೆಗೆದು ಕೊಳ್ಳುವ ನಿರ್ಧಾರಗಳನ್ನು ಅತ್ಯಂತ ಸೂಕ್ಷ್ಮವಾಗಿ ಭಾವಾನಾತ್ಮಕವಾಗಿ ನಿರೂಪಿಸಿದ್ದಾರೆ. ಈ ಮೊದಲು ಇದೇ ಲೆಸ್ಬಿಯನಿಸುಂ ಕಥಾವಸ್ತುವಿನ ಮೇಲೆ ಬಂದಂತಹ "ಫೈರ್" ಮತ್ತು "ಗರ್ಲ್ ಫ್ರೆಂಡ್ಸ್" ಚಿತ್ರದಂತೆ "ಸಂಚಾರಂ" ಯಾವುದೇ ಸಂಚಲನವನ್ನ ಉಂಟು ಮಾಡದೇ ತಂಪಗಿನ ಅನುಭೂತಿಯನ್ನು ನೀಡುತ್ತದೆ. ಹಾಗೆಯೇ ಒಂದು ದೃಶ್ಯ ಕಾವ್ಯದ ಅನುಭವವನ್ನು 'ಸಂಚಾರಂ' ನೀಡುತ್ತದೆ ಎಂದರೆ ಅತಿಶಯೋಕ್ತಿಯಾಗಲಾರದು.

ಕೇರಳದ ಹಳ್ಳಿ ಒಟ್ಟಪಾಳಂನಲ್ಲಿ ಚಿತ್ರೀಕರಿಸಲಾಗಿರುವ ಈ ಚಿತ್ರದಲ್ಲಿ ಅಲ್ಲಿಯ ಹಳ್ಳಿಯ ಜೀವನ, ತೊರೆಗಳು, ಗಿಡಮರಗಳು, ನೀರಿನ ಕೊಳ ಕಾಡಿನ ಸೊಬಗನ್ನು ಪ್ರೇಕ್ಷಕರಿಗೆ ಉಣಬಡಿಸುವಲ್ಲಿ ಲಿಜಿ ಯಶಸ್ವಿಯಾಗಿದ್ದಾರೆ. ಅದಕ್ಕೂ ಮುಖ್ಯವಾಗಿ ಕಿರಣ್ ಮತ್ತು ಡೆಲಿಲಾ ಅವರ ನಡುವಿನ ಪ್ರಣಯದ ದೃಶ್ಯಗಳು ಎಲ್ಲೂ ಅಶ್ಲೀಲ ಎನಿಸದಂತೆ ಸಹಜವಾಗಿ ಚಿತ್ರೀಕರಿಸಿರುವುದು ನಿರ್ದೇಶಕಿಯ ಸೂಕ್ಷ್ಮ ಗ್ರಹಿಕೆ ಹಾಗೂ ಅಭಿರುಚಿಯನ್ನು ತೋರಿಸುತ್ತದೆ. ಚಿತ್ರದ ಅಂತ್ಯವು ಆಶಾಭಾವನೆಯನ್ನ ಮೂಡಿಸುವಂತೆ ಕೊನೆಗೊಂಡಿದೆ.

ಈ ಚಿತ್ರ ಅಂತರ್ ರಾಷ್ಟ್ರೀಯ ಚಿತ್ರೋತ್ಸವ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಹಾಗೆಯೇ ಕಳೆದ ವರ್ಷ ಗೋವಾದಲ್ಲಿ ನಡೆದ ಅಂತರ್ ರಾಷ್ಟ್ರೀಯ ಚಿತ್ರೋತ್ಸವದ "ಇಂಡಿಯನ್ ಪನೋರಮಾ" ವಿಭಾಗದಲ್ಲಿ ಪ್ರದರ್ಶನಗೊಂಡಿತ್ತು.

*******

# ವಿದಾಯ

ಈ ಚಿಕ್ಕ ಕೋಣೆಯಲಿ
ಮುಚ್ಚಿದ ಕಿಟಕಿ ಬಾಗಿಲುಗಳ
ಹಿಂದೆಯೂ
ಬೆಚ್ಚಿಸುವಭಯದ ಕಂಪನ
ಅಸ್ತವ್ಯಸ್ತ ವಾತಾಯನ
ಉಸಿರು ಕಟ್ಟಿಸುವ ವಾತಾವರಣ
ಆದರೂ..............................
ನಿನ್ನ ವಿಶ್ವಾಸವ
ನನ್ನ ಉಚ್ಛ್ವಾ ಸವಾಗಿಸಲು
ನನಗಿಷ್ಟವಿಲ್ಲ
ಬೇಕಿದೆ ನನಗೆ
ಹಚ್ಚ ಹಸಿರ ಹಂದರದಿಂದ
ಹೊರ ಹೊಮ್ಮುವ
ಹೊಚ್ಚ ಹೊಸ ಗಾಳಿ

ಇಷ್ಟುದಿನ
ತಲ ತಲಾಂತರದಿಂದ
ನಿನ್ನ ನೆರಳಾಗಿದ್ದು ಸಾಕು
ನಡೆಯುತಿದೆ ಒಡಲಲಿ
ನಿಲ್ಲದ ಬೈಜಿಕ ವಿದಲನ
ಸ್ವಪ್ರಕಾಶ ಚಿಮ್ಮಿ
ಸ್ವಯಂ ಪ್ರಭೆಯಾಗುವ
ಕಾಲ ಬಂದಿದೆ
ಇಗೋ ನಿನ್ನ
ಅನುನಯ ಅಟ್ಟಹಾಸಕೆ
ಕಡೆಯ ವಿದಾಯ

- ಪ್ರಭಾಮಣಿನಾಗರಾಜ
"ಶ್ರೀರಕ್ಷಾ" 80 ಅಡಿ ರಸ್ತೆ
ಹುಣಸಿನ ಕೆರೆ ಸೇತುವೆ ಹತ್ತಿರ,
ಹಾಸನ - 573201

# ರಾತ್ರಿಯ ನೆರಳುಗಳು

-1-

ಮತ್ತೆ ಅದೇ ಕಡಲು ಅದೇ ನಡುರಾತ್ರಿ
ಅದೇ ಅಲೆಯಬ್ಬರ
ನನ್ನಲ್ಲುಂಟು ಕತ್ತಿಚಾಕು ಬಾಕು
ಬಗಲಲ್ಲೇ ಚೀಲದಲ್ಲಿದೆ ಕೈಬಾಂಬು
ನಿನ್ನಲ್ಲೂ ಅವೆಲ್ಲ ಅಷ್ಟೇ ಹಾಗೆಯೇ
ಇವೆಯೆಂದು ನನಗೆ ಗೊತ್ತು.

ಬೀಸುವ ಬಿರುಗಾಳಿಯಲ್ಲಿ
ಒಬ್ಬರೆದೆಗೊಬ್ಬರು ಇಟ್ಟಿದ್ದೇವೆ ಗುರಿ
ಕಾದಿದ್ದೇವೆ ; ಯಾವುದೇ ಕ್ಷಣ
ಮೇಲೆರಗಬಹುದು ಎಂದು -
ಈ ಮೈಗಳಿಗೂ ಅನ್ನಿಸಿದೆ.
ಮಾತಿರಲಿ, ಉಸಿರು ಬಿಟ್ಟರೂ
ವಿಷ ಬೆಂಕಿ ರಾಚಿಬಿಡಲು
ಕಾದಿದ್ದೇವೆ ಕೊನೆಗಾಗಿ.

- 2 -

ಎಂದೋ ಒಮ್ಮೆ ಈ ಪೋರ ಬಂದರಿನಲ್ಲಿ
ಕಣ್ತೆರೆದಿದ್ದ ಒಬ್ಬ ಪೋರ
ನೋಡುತ್ತಲೇ ಬೆಳೆಬೆಳೆದು
ಬಿಳಿಕಣ್ಣ ಬೆಳಕಲ್ಲಿ
ಪೂರ್ವ ಪಶ್ಚಿಮಗಳ ತೊಳೆದಿದ್ದನಂತೆ

ಒಂಟಿ ಕೋಲೂರುತ್ತ ತುಂಡಬಟ್ಟೆಯಲ್ಲಿ
ಊರು ಕೇರಿಗಳ ಸುತ್ತಿ ಸುತ್ತಿ
ಹಿಂಸೆ ಹೆಸರೆತ್ತಗೊಡದೆ ಎದೆಗಳಲ್ಲಿ
ಕರುಣೆ ಬೀಜ ಬಿತ್ತಿದ್ದನಂತೆ.

ನಟ್ಟನಡುರಾತ್ರಿಯಲ್ಲಿ ದೇಶದ
ಕಟ್ಟು ಕಳಚಿ, ನಾಡ ಹಣತೆಗಳ ಬೆಳಗಿಸಿದ್ದನಂತೆ,
ಅವನನ್ನೇ ಗತಿ ಕಾಣಿಸಿದ ನಮಗೆ
ಯಾರದೇನೀಗ ಹಂಗು ? ಮಿಸುಕಲಿ
ಮಾಡೋಣ ಖೈಮ ಎಂದು ಕಾದಿದ್ದೇವೆ ಅಷ್ಟೆ.

- 3 -

ಮತ್ತೆ ಅದೇ ಕಡಲು ಅದೇ ಕಪ್ಪು ಇರುಳು
ಅಲೆಯಲೆಯಲ್ಲು ಹಬ್ಬಿದ ರಕ್ತಧಾರೆ
ಸುತ್ತಿ ಸುತ್ತಿ ಕಗ್ಗತ್ತಲಲ್ಲಿ ತಳೆದಿದೆ ಟಾರಿನ ಬಣ್ಣ,
ಕತ್ತಿಗುರಾಣಿ ಕೆಳಗಿಟು ಕೂರೋಣ
ಇನ್ನಾದರು ಅನ್ನುವಾಗಲೆ

ಕಿಟಾರನೆ ಪ್ರಾಣ ಹೋಗುವ ಕೂಗು.
ನೆರೆಮನೆಯ ತುಂಬು ಗರ್ಭಿಣಿಯದೇ ಧ್ವನಿ
ಹಾಯ್ ಅಲ್ಲಾ ! ಅಯೋ ಬೇಡಿರೋ
ಕೊಲ್ಲ ಬೇಡಿರೋ ನನ್ನ ಕಾಪಾಡಿರೋ
ಕಂಸಕುಲವೇ ಸೀಳಿಬಿಟ್ಟಿರಾ ಗರ್ಭವನ್ನ
ಸೀಳಬಾರದೇ ನಿಮ್ಮ ಧರ್ಮಪಿಶಾಚಿಯನ್ನ
ಸುಟ್ಟು ಬಿಟ್ಟಿರಾ ಒದ್ದು ಹೊರಳುವ
ತಾಯಿ ಜೀವವನ್ನ.

ಮಾತೃದೇವೋಭವ ! ಉದ್ಧಾರವಾಯ್ತುಕುಲ
ಮಾತೃದೇವೋಭವ ! ಬೆಳಗಿತು ಸಂಸ್ಕೃತಿ
ಮಾತೃದೇವೋಭವ ! ನಡೆಯಲಿ ಕೋಟಿ ಜಪ !
ಆಗಲಿ ಮಾತೆಯರ ಪ್ರಾಣಗಳ ಆಹುತಿ !

ಡಾ.ಬಿ.ಎಸ್. ಸುಮಿತ್ರಾ ಬಾಯಿ

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

**ಸಂ.ಮಂಡಳಿ**

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

**ಮಾನಸ**

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067